# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಮಾರ್ಚ್ ೩, ೨೦೧೬ (ಫಾಲ್ಗುಣ ೧೩, ಶಕ ವರ್ಷ ೧೯೩೭)<br>Bengaluru, Thursday, March 3, 2016 ( Phalguna 13, Shaka Varsha 1937) | ಸಂಚಿಕೆ ೯<br>Issue 9 |
|---|---|---|

## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:12/14–15, ದಿನಾಂಕ : 19 : 12 : 2015.**

| | | |
|---|---|---|
| **ಉಪಸ್ಥಿತರು** | :: | ಮೋಹನ್ ಎನ್ ಗಂಗೋಳಿ, ಕ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಫಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ,<br>ಅಂಬ್ಲಿಗೊಳ ವಲಯ, ಅಂಬ್ಲಿಗೊಳ.<br>(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು** | :: | 1) ಕರಿಯಪ್ಪ 2) ಗಣೇಶ 3) ಮಂಜು 4) ಜಯಂತ 5) ಸಿದ್ದಪ್ಪ |
| **ಭಾಧ್ಯತೆದಾರರು** | :: | ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ :–**

ದಿ:12–10–2014 ರಂದು ಹಿರೋಹೊಂಡಾ ಸಿಡಿ–100 ಕೆಎ–15–ಇ–2345 ರಲ್ಲಿ ಸಾಗುವಾನಿ ನಾಟಾವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ ಬಗ್ಗೆ ಸಾಲೂರು ಶಾಖೆಯ ಉಪವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:12–10–2014 ರಂದು ಅಂಬ್ಲಿಗೊಳ ವಲಯದ ಸಾಲೂರು ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ, ಶಿಕಾರಿಪುರ ತಾಲ್ಲೂಕು, ಕಸಬಾ ಹೋಬಳಿ, ಹಿರೇಕಲವತ್ತಿ ಗ್ರಾಮದ ಸ.ನಂ:45ರ ಬೆಳಂದೂರು ಮನ್ನಾಜಂಗಲಿಯ ಸಾಗುವಾನಿ ನೆಡುತೋಪಿನಲ್ಲಿ ಪರಿಶೀಲಿಸಿದಾಗ ಇಬ್ಬರು ಆಸಾಮಿಗಳು ಮರ ಕೊಯ್ತ ಮಾಡುತ್ತಿದ್ದು, 3 ಜನ ಆಸಾಮಿಗಳು ಕೊಯ್ತ ಮಾಡಿದ ತುಂಡುಗಳನ್ನು ದಾರಿಯ ಬದಿಗೆ ದಾಸ್ತಾನು ಮಾಡುತ್ತಿರುವುದು ಕಂಡು ಬಂದಿದ್ದು, ನಂತರ ಇಬ್ಬರು ಬೈಕ್‌ನಲ್ಲಿ ಎರಡು ಮರದ ತುಂಡನ್ನು ಸಾಗಿಸಲು ಪ್ರಯತ್ನಿಸಿದಾಗ, ಇಲಾಖೆಯವರನ್ನು ನೋಡಿ ಎಲ್ಲರು ಓಡಲು ಪ್ರಾರಂಭಿಸಿದರು. ಅದರಲ್ಲಿ ಕರಿಯಪ್ಪ ಬಿನ್ ರುದ್ರಪ್ಪ, 22 ವರ್ಷ, ತುಂಬ್ರಿ ಹೊಸೂರು ಗ್ರಾಮ ವಾಸಿಯನ್ನು ಹಿಡಿದರು. ಉಳಿದ 4 ಜನ ಕೈಗೆ ಸಿಗದೆ ಪರಾರಿಯಾದರು. ಓಡಿ ಹೋದವರು ಯಾರೆಂದು ಹಿಡಿದವನ ಹತ್ತಿರ ವಿಚಾರಿಸಿದಾಗ, 1) ಗಣೇಶ್ ಬಿನ್ ಕಾಶಪ್ಪ, 26 ವರ್ಷ, 2) ಮಂಜು ಬಿನ್ ಕರಿಯಪ್ಪ, 25 ವರ್ಷ, 3) ಜಯಂತ ಬಿನ್ ಕೃಷ್ಣಪ್ಪ, 20 ವರ್ಷ, ಈ ಮೂರು ಜನ ಶಿಕಾರಿಪುರ ತಾಲ್ಲೂಕಿನ ತುಮರಿ ಹೊಸೂರು ಗ್ರಾಮ ವಾಸಿಗಳೆಂದು 4) ಸಿದ್ದಪ್ಪ, ಶಿಕಾರಿಪುರ ವಾಸಿ ಎಂದು ತಿಳಿಸಿದನು. ದಾಸ್ತಾನಿದ್ದ ತುಂಡುಗಳು ಕೈಗರಗಸದಿಂದ ಕೊಯ್ತ ಮಾಡಿದ್ದಾಗಿದ್ದು, ಹಿರೋ ಹೋಂಡಾ ಸಿಡಿ 100 ಬೈಕ್ ತುಂಬಾ ಹಳೆಯ ಬೈಕಾಗಿದ್ದು, ನಂ:ಕೆಎ–15–ಇ–2345, ಇಂಜಿನ್ ನಂಬರ್ ಮತ್ತು ಛಾಸಿಸ್ ನಂಬರ್ ಕಂಡುಬಂದಿಲ್ಲ. ಸದರಿ ನಾಟಾಗಳ ತುದಿ ಬುಡದಲ್ಲಿ ಇಲಾಖಾ ಛಾಪಾ ಗುರುತು ಕಂಡು ಬಂದಿರುವುದಿಲ್ಲ ಹಾಗೂ ಸಾಗಿಸಲು ರಹದಾರಿ ಇರಲಿಲ್ಲ. ಆದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, 15 ತುಂಡು ನಾಟಾಗಳನ್ನು ಅಳತೆ ಮಾಡಲಾಗಿ 0.834 ಎಂ 3 ಮತ್ತು ಸಾಗುವಾನಿ 9 ಎಳೆಗಳಿದ್ದು, ಈ ನಾಟಾ ಮತ್ತು ಎಳೆಗಳನ್ನು 12 ಸಾಗುವಾನಿ ಮರಗಳಿಂದ ತಯಾರಿಸಿರುತ್ತಾರೆ. ಇದು ಅಕ್ರಮವಾಗಿ ಕಡಿದು ಸಾಗಾಣಿಕೆ ಮಾಡಿರುವುದು ಕಂಡು ಬಂದಿದೆ. ಆದ್ದರಿಂದ ವಾಹನ, ಆಸಾಮಿ ಹಾಗೂ ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು, ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 24, 33, 62, 71(ಎ), 80 ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಅಂಬ್ಲಿಗೊಳ ವಲಯದ ಅ.ಮೊ. ಸಂಖ್ಯೆ 33/14–15ನ್ನು ಸಾಲೂರು ಶಾಖೆಯ, ಉಪ ವಲಯ ಅರಣ್ಯಾಧಿಕಾರಿ, ದಾಖಲಿಸಿ, ಆಸಾಮಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ದಾಖಲೆಗಳೊಂದಿಗೆ, ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ವಾಹನವನ್ನು ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ ಬಿ ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಬಿ3:ಅಮೊ:ವಾಹನ:ವಿವ–12/14–15, ದಿ:29–10–2014 ರಂದು ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಪತ್ರ ಬರೆದು ಕೋರಿದೆ. ಅದರಂತೆ ಸಾರಿಗೆ ಅಧಿಕಾರಿ, ಸಾಗರ ಇವರು ಈ ವಾಹನದ ಬಿ ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ಈ ನ್ಯಾಯಾಲಯಕ್ಕೆ ದಿ:10–11–2014 ರಂದು ಒದಗಿಸಿರುತ್ತಾರೆ. ಈ ಬಿ. ಎಕ್ಸಟ್ರ್ಯಾಕ್ಟ್‌ನಲ್ಲಿ ಬಂಗಾರಪ್ಪ ಇ ಬಿನ್ ವೀರಭದ್ರಪ್ಪ, ಇಂಡುವಳ್ಳಿ, ಹೊನ್ನೇಸರ(ಅಂಚೆ), ಸಾಗರ (ತಾ) ಇವರ ಹೆಸರಿಗೆ ನೋಂದಣಿಯಾಗಿರುವುದು ಕಂಡು ಬಂದಿದೆ. ಅದರಂತೆ ಈ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ)(1) ರ ಪ್ರಕಾರ ನೋಟಿಸ್‌ನ್ನು 30 ದಿನಗಳ ಕಾಲಾವಕಾಶ ನೀಡಿ ದಿ:19–11–2014 ರಂದು ನೋಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ಸ್ವೀಕರಿಸಿದ ಬಗ್ಗೆ ಸ್ವೀಕೃತಿ ಅಂಚೆ ಇಲಾಖೆಯವರು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ.

ಈ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ:ಸಿಆರ್–37/14–15, ದಿ:13–11–2014ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ ದಿ:10–12–2014 ರಂದು ಸಾಗರ ವಾರ್ತಾ ದಿನಪತ್ರಿಕೆಯಲ್ಲಿ ಮತ್ತು ದಿ:26–02–2015 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ಈ ಪ್ರಕಟಣೆ ದಿನಪತ್ರಿಕೆಯಲ್ಲಿ ಮತ್ತು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ಈ ವಾಹನ ಬಿಡಿಸಿಕೊಳ್ಳುವ ಬಗ್ಗೆ ವಾಹನ ಮಾಲೀಕರಿರಾಗಲೀ, ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:–31–10–2015 ರಂದು ವಾದ ಮಂಡಿಸಿ, ಸಾಗಿವಾನಿ ನಾಟಾ ಸಾಗಿಸುತ್ತಿರುವಾಗ ಸಾಲೂರು ಶಾಖೆ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ಅಲ್ಲದೇ ಈ ವಾಹನದಲ್ಲಿ ಅಕ್ರಮವಾಗಿ ಸರ್ಕಾರಿ ಜಾಗದಲ್ಲಿದ್ದ ಸಾಗುವಾನಿ ಮರ ಅಕ್ರಮವಾಗಿ ಕಡಿದು ಸಾಗಿಸಿದ ಬಗ್ಗೆ ತನಿಖಾಧಿಕಾರಿ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿ, ವಿಚಾರಣಾ ವರದಿಯೊಂದಿಗೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಿರುವುದು ಸಾಭೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

1) ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮೋಹನ್ ಎನ್ ಗಂಗೋಳಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 71(ಎ) ಈ ತಾರೀಖಿನವರೆಗೆ ಆದ ತಿದ್ದುಪಡಿ ಕಾಯಿದೆ ಪ್ರಕಾರ, ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ಅರಣ್ಯ ಮೊಕದ್ದಮೆ ಸಂಖ್ಯೆ 33/14–15 ರಲ್ಲಿ ದಿ:08–11–2014 ರಂದು ವಶಪಡಿಸಿಕೊಂಡ ವಾಹನ ಹಿರೋ ಹೊಂಡಾ ಬೈಕ್, ಕೆಎ–15–ಇ–2345, (ಇಂಜಿನ್ ನಂ: H10E722003, ಛಾಸ್ಸಿಸ್ ನಂ: H12F089078) ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನ ಸಾಗುವಾನಿ ನಾಟಾ 15=0.834 ಎಂ3 ಮತ್ತು ಸಾಗುವಾನಿ ಎಳೆ–09 ಸಂಖ್ಯೆಯನ್ನು ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 19–12–2015 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

P.R. 44
SC-25

**ಮೋಹನ್ ಎನ್ ಗಂಗೋಳಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:02/14–15, ದಿನಾಂಕ : 19 : 12 : 2015.**

| | | |
|---|---|---|
| **ಉಪಸ್ಥಿತರು** | :: | ಮೋಹನ್ ಎನ್ ಗಂಗೋಳಿ, ಕ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಸಾಗರ ವಿಭಾಗ, ಸಾಗರ. |
| **ಫಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ,<br>ಹೊಸನಗರ ವಲಯ, ಹೊಸನಗರ.<br>(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು** | :: | ಪತ್ತೆಯಾಗಿಲ್ಲ. |
| **ಭಾದ್ಯತೆದಾರರು** | :: | ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ :–**

ದಿ: 13–06–2014 ರಂದು ಟಾಟಾ ಕ್ಯಾಂಟರ್ ನಂ:ಕೆಎ–19–ಎಎ–1571 ರಲ್ಲಿ ಬೀಟೆ ನಾಟಾವನ್ನು ಅಕ್ರಮವಾಗಿ ಸಾಗಿಸುತ್ತಿರುವುದನ್ನು ಹುಂಚ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:13–06–2014 ರಂದು ಹೊಸನಗರ ವಲಯದ ಹುಂಚ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಹೊಸನಗರ ತಾಲ್ಲೂಕು ಹುಂಚಾ ಹೋಬಳಿ ಕಡಸೂರು ಗ್ರಾಮ ಸ.ನಂ:55 ರ ಮೀಸಲು ಅರಣ್ಯ ಪ್ರದೇಶದಲ್ಲಿ ಬೆಳಗಿನ ಜಾವ 5.50 ರ ಸಮಯದಲ್ಲಿ ಇಲಾಖಾ ಜೀಪಿನಲ್ಲಿ ಜಲ್ಲಿ ರಸ್ತೆಯಲ್ಲಿ ಬರುತ್ತಿರುವಾಗ ಒಂದು ವಾಹನಕ್ಕೆ ನಾಟಾ ತುಂಬುತ್ತಿರುವುದು ಕಂಡುಬಂದಿದ್ದು, ಬ್ಯಾಟರಿ ಬೆಳಕಿನ ಸಹಾಯದಿಂದ ಹತ್ತಿರ ನೋಡಲಾಗಿ ಅಲ್ಲಿದ್ದ ಆಸಾಮಿಗಳು ಕತ್ತಲೆಯಲ್ಲಿ ಓಡಿ ಪರಾರಿಯಾಗಿರುತ್ತಾರೆ. ನಂತರ ವಾಹನ ಪರಿಶೀಲಿಸಲಾಗಿ ಟಾಟಾ ಕ್ಯಾಂಟರ್ ನಂ:ಕೆಎ–19–ಎಎ–1571 ಆಗಿದ್ದು, (ಛಾಸ್ಸಿಸ್ ನಂ: MAT457056D7E16662, ಇಂಜಿನ್ ನಂ: 497TC44EWY826946). ವಾಹನದೊಳಗಡೆ ಬೀಟೆ ಜಾತಿಯ ಮರದ ತುಂಡುಗಳಿದ್ದು, ಈ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ. ಹಾಗೂ ತುಂಡುಗಳನ್ನು ಸಾಗಿಸಲು ರಹದಾರಿ ಇರಲಿಲ್ಲ. ಆದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ನಾಟಾ ತುಂಡುಗಳಿಗೆ ನಂಬರ್ ಕೊಟ್ಟು, 8 ಬೀಟೆ ತುಂಡುಗಳನ್ನು ಅಳತೆಮಾಡಲಾಗಿ 2.180 ಎಂ3 ಪ್ರಮಾಣವಿರುತ್ತದೆ. ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಮತ್ತು ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು, ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಹೊಸನಗರ ವಲಯದ ಅ.ಮೊ. ಸಂಖ್ಯೆ 04/14–15, ದಿನಾಂಕ:13–06–2014 ರಂದು ಹುಂಚಾ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ದಾಖಲಿಸಿ, ನಂತರ ವಾಹನದೊಂದಿಗೆ ಎಲ್ಲಾ ದಾಖಲೆಗಳನ್ನು ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ, ಹೊಸನಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಹೊಸನಗರ ಇವರು ಈ ವಾಹನ ಮತ್ತು ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ 'ಬಿ' ಎಕ್ಸಟ್ರ್ಯಾಕ್ಟ್ ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ:ವಿವ–02/14–15. ದಿ: 24–06–2014 ರಂದು ಸಾರಿಗೆ ಅಧಿಕಾರಿ, ಮಂಗಳೂರು ಇವರಿಗೆ ಪತ್ರ ಬರೆದು ಕೋರಲಾಯಿತು. ಅದರಂತೆ ಸಾರಿಗೆ ಅಧಿಕಾರಿ, ಮಂಗಳೂರು ಇವರು ಈ ವಾಹನದ 'ಬಿ' ಎಕ್ಸಟ್ರ್ಯಾಕ್ಟನ್ನು ದಿ:14–07–2014 ರಂದು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಈ 'ಬಿ' ಎಕ್ಸಟ್ರ್ಯಾಕ್ಟ್ ನಲ್ಲಿ ಶ್ರೀ ಮಹಮದ್ ರಿಜ್ವಾನ್ ಬಿನ್ ಅಬ್ದುಲ್ ರೆಹಮಾನ್, ಮನೆ ನಂ:3–82, ಶಿವನಗರ, ಮೂಡುಶೆಡ್ಡೆ, ಮಂಗಳೂರು ಎಂದು ನಮೂದಾಗಿದ್ದು, ಈ ಹೆಸರಿನ ವಿಳಾಸಕ್ಕೆ ಹಾಗೂ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ 30 ದಿನಗಳ ಕಾಲಾವಕಾಶ ನೀಡಿ ನೋಂದಣಿ ಅಂಚೆ ಮೂಲಕ ನೋಟಿಸ್ ಜಾರಿ ಮಾಡಿದೆ. ಲಕೋಟೆ ಮೇಲೆ "Out of Station" ಎಂದು ಅಂಚೆ ಇಲಾಖೆಯವರು ಬರೆದು ಲಕೋಟೆ ಹಿಂದಿರುಗಿಸಿರುತ್ತಾರೆ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ:ಸಿಆರ್–26/14–15, ದಿ:02–09–2014ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ, ಗೆಜೆಟ್ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ ದಿ:12–09–2014ರಂದು ವಿಜಯ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ದಿ:30–10–2014ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:31–10–2015ರಂದು ವಾದ ಮಂಡಿಸಿ, ಬೀಟೆ ನಾಟಾವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ ಬಗ್ಗೆ ಉಪ ವಲಯ ಅರಣ್ಯಾಧಿಕಾರಿ, ಹುಂಚ ಶಾಖೆ ಇವರು ಪತ್ತೆಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ಈ ವಾಹನದ ಮೇಲೆ ಕೇಸು ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯನ್ನು ವಲಯ ಅರಣ್ಯಾಧಿಕಾರಿ, ಹೊಸನಗರ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ದಾಖಲೆಗಳಿಂದ ಈ ವಾಹನವನ್ನು ಅರಣ್ಯ ಉತ್ಪನ್ನಗಳನ್ನು ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮೋಹನ್ ಎನ್. ಗಂಗೋಳಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ, ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಅರಣ್ಯ ಮೊಕದ್ದಮೆ ಸಂಖ್ಯೆ:04/14–15 ರಲ್ಲಿ ಜಪ್ತು ಮಾಡಿದ ವಾಹನ 1109 ಇಎಕ್ಸ್ ಟಾಟಾ ಕ್ಯಾಂಟರ್ ನಂ:ಕೆಎ–19–ಎಎ–1571 ಆಗಿದ್ದು, (ಛಾಸ್ಸಿಸ್ ನಂ: MAT457056D7E16662, ಇಂಜಿನ್ ನಂ: 497TC44EWY826946)ನ್ನು ಮತ್ತು ವಾಹನದಲ್ಲಿದ್ದ ಬೀಟೆ ನಾಟಾ 08=2.180 ಎಂ3 ಯನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:19:12: 2015 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ

ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**P.R. 45**

**SC-25**

**ಮೋಹನ್ ಎನ್ ಗಂಗೋಳಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:08/14–15, ದಿನಾಂಕ : 19 : 12 : 2015.**

| | | |
|---|---|---|
| **ಉಪಸ್ಥಿತರು** | :: | ಮೋಹನ್ ಎನ್ ಗಂಗೋಳಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ, ಆನಂದಪುರ ವಲಯ, ಚೋರಡಿ. (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು** | :: | 1) ಮಹಮ್ಮದ್ ರಿಯಾಜ್ 2) ಬಾಬು 3) ಬರಕತಿ 4) ತಬರೇಜ್ |
| **ಭಾದ್ಯತೆದಾರರು** | :: | ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ :–**

ದಿ:05–09–2014 ರಂದು ಮಾರುತಿ ಓಮ್ನಿ ಕೆಎ–02–ಬಿ–4915ರಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಿಸುತ್ತಿರುವುದನ್ನು ಚೋರಡಿ ಶಾಖೆ ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:05–09–2014ರಂದು ಆನಂದಪುರಂ ವಲಯದ ಚೋರಡಿ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಶಿವಮೊಗ್ಗ ತಾಲ್ಲೂಕ್ ಕುಂಸಿ ಹೋಬಳಿ ಚೋರಡಿ ಗ್ರಾಮದ ದೊಡ್ಡಹಳ್ಳದ ಬಳಿ ರಾತ್ರಿ 1.00 ಗಂಟೆ ಸಮಯದಲ್ಲಿ ಕಾಯುತ್ತಿರುವಾಗ ಒಂದು ವಾಹನ ಶಿಕಾರಿಪುರ ಕಡೆಯಿಂದ ಚೋರಡಿ ಕಡೆ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ 50 ಮೀಟರ್ ದೂರದಲ್ಲಿ ವಾಹನ ನಿಲ್ಲಿಸಿ, ಅದರಲ್ಲಿದ್ದ ನಾಲ್ಕು ಜನ ಆಸಾಮಿಗಳು ವಾಹನದಿಂದ ಇಳಿದು ಓಡಲು ಪ್ರಾರಂಭಿಸಿದಾಗ, ಮಹಮ್ಮದ್ ರಿಯಾಜ್ ಬಿನ್ ಮಹಮ್ಮದ್ ಇಲಿಯಾಸ್ 32 ವರ್ಷ, ಜಯನಗರ, ಶಿಕಾರಿಪುರ ವಾಸಿ ಇವನನ್ನು ಹಿಡಿದರು. ಉಳಿದ 3 ಜನ ಕತ್ತಲೆಯಲ್ಲಿ ಓಡಿ ಕೈಗೆ ಸಿಗದೆ ಪರಾರಿಯಾದರು. ಪರಾರಿಯಾದ ಆಸಾಮಿಗಳ ಹೆಸರು 1) ಬಾಬು,ಕೆ.ಇ.ಬಿ. ಹಿಂಭಾಗ, ಶಿಕಾರಿಪುರ ವಾಸಿ, 2) ಬರಕತಿ, ಜಯನಗರ, ಶಿಕಾರಿಪುರ, 3) ತಬರೇಜ್, ಆಶ್ರಯ ಬಡಾವಣೆ, ಶಿಕಾರಿಪುರ ಎಂದು ತಿಳಿಸಿದನು. ವಾಹನ ಮಾರುತಿ ಓಮ್ನಿ ಕೆಎ–02–ಬಿ–4915 (ಛಾಸಿಸ್ ನಂ: ST91-IN518313, ಇಂಜಿನ್ ನಂ: F8BIN-2258432) ಆಗಿದ್ದು, ವಾಹನದೊಳಗೆ ಬೀಟೆ ನಾಟಾ 02=0.113 ಎಂ3 ಇದ್ದು, ಈ ನಾಟಾ ಸಾಗಾಣಿಕೆಗೆ ರಹದಾರಿ ಇಲ್ಲದೇ ಇದ್ದುದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಪ್ರಥಮ ವರ್ತಮಾನ ವರದಿ ಮಹಜರ್ ವರದಿ, ಜಪ್ತು ವರದಿಯೊಂದಿಗೆ ಆರೋಪಿ ವಾಹನ ಮತ್ತು ಅರಣ್ಯ ಉತ್ಪನ್ನ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು, 1969ರ ಉಪನಿಯಮ 144, 165ರ ಪ್ರಕಾರ ಆನಂದಪುರ ವಲಯದ ಅ.ಮೊ. ಸಂಖ್ಯೆ 22/14–15, ದಿ:05–09–2014 ರಂದು ಉಪ ವಲಯ ಅರಣ್ಯಾಧಿಕಾರಿ ಚೋರಡಿ ಶಾಖೆ ಇವರು ದಾಖಲಿಸಿರುತ್ತಾರೆ. ನಂತರ ವಾಹನ ಅರಣ್ಯ ಉತ್ಪನ್ನ ಮತ್ತು ದಾಖಲೆಗಳೊಂದಿಗೆ, ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ,ಚೋರಡಿ ಇವರು ವಾಹನವನ್ನು ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ "ಬಿ" ಎಕ್ಸ್‌ಟ್ರ್ಯಾಕ್ಟ್ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ:ವಿವ–08/14–15ರಲ್ಲಿ ದಿ:05–09–2014, ದಿ:04–02–2015 ರಂದು ಸಾರಿಗೆ ಅಧಿಕಾರಿ, ರಾಜಾಜಿನಗರ (ಪಶ್ಚಿಮ) ಬೆಂಗಳೂರು ಇವರಿಗೆ ಪತ್ರ ಬರೆದು ಕೋರಲಾಗಿದೆ. ಅದರಂತೆ ಸದರಿ ವಾಹನದ ಸಿ.ಸಿ.ಯನ್ನು ಸಹಾಯಕ ಸಾರಿಗೆ ಅಧಿಕಾರಿ, ಹಾವೇರಿಗೆ ವರ್ಗಾಯಿಸಿದೆಂದು ಸಾರಿಗೆ ಅಧಿಕಾರಿ, ರಾಜಾಜಿನಗರ (ಪಶ್ಚಿಮ), ಬೆಂಗಳೂರು ಇವರು ಪತ್ರ ಸಂಖ್ಯೆ:ಪ್ರಾಸಾಅ/ಬೆಂ(ಪ)/ಸಾರಿಗೆ/14–15, ದಿ:18–02–2015ರ ಪತ್ರದಲ್ಲಿ ತಿಳಿಸಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಅದರಂತೆ ಬಿ3/ಅಮೊ/ವಾಹನ/ವಿವ–08/14–15, ದಿ:03–03–2015 ರಂದು ಸಹಾಯಕ ಸಾರಿಗೆ ಅಧಿಕಾರಿ, ಹಾವೇರಿ ಇವರಿಗೆ ಪತ್ರ ಬರೆದು ಈ ವಾಹನ ಕೆಎ–02–ಬಿ–1915 ಮಾರುತಿ ವ್ಯಾನ್ "ಬಿ" ಎಕ್ಸ್‌ಟ್ರ್ಯಾಕ್ಟ್ ಒದಗಿಸಲು ಕೋರಲಾಗಿದೆ. ಅದರಂತೆ, ಸಹಾಯಕ ಸಾರಿಗೆ ಅಧಿಕಾರಿ, ಹಾವೇರಿ ಇವರು ಪತ್ರ ಸಂಖ್ಯೆ:ಪ್ರಾಸಾಅ/ಹಾ/ನೋಂದಣಿ/14–15, ದಿ:06–03–2015 ರಂದು ಮಾರುತಿ ವ್ಯಾನ್ ಕೆಎ–02–ಬಿ–4915ರ "ಬಿ" ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಿ ರೂ.11,235–00ನ್ನು ವಾಹನ ಮಾಲೀಕರು ಸರ್ಕಾರಕ್ಕೆ ಕಟ್ಟಲು ಬಾಕಿಯಿದೆಯೆಂದು ತಿಳಿಸಿರುತ್ತಾರೆ. ಈ "ಬಿ" ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ಆರ್.ಸಿ. ಮಾಲೀಕರ ಹೆಸರು ಶ್ರೀ ನಾಗಪ್ಪ ಶಿವಪ್ಪ ಚಿಕ್ಕೇರಿ ಬಿನ್ ಶಿವಪ್ಪ, ಅರಳೇಶ್ವರ ವಾಸ ಮತ್ತು ಅಂಚೆ, ಹಾನಗಲ್ ತಾ:, ಹಾವೇರಿ ಜಿಲ್ಲೆ ಎಂದು ನಮೂದಾಗಿರುತ್ತದೆ. ಇವರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ)(1) ರ ಪ್ರಕಾರ 30 ದಿನಗಳ ಕಾಲಾವಕಾಶ ನೀಡಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎನ್ನುವುದಕ್ಕೆ ವಾಹನದ ದಾಖಲೆಗಳೊಂದಿಗೆ ಕ್ಲೇಮು ಅರ್ಜಿ ಸಲ್ಲಿಸಲು ತಿಳಿಸಿ, ದಿ:28–03–2015 ರಂದು ನೋಟೀಸ್ ನೋಂದಣಿ ಅಂಚೆ ಮೂಲಕ ಜಾರಿ ಮಾಡಲಾಗಿದ್ದು, ಸ್ವೀಕೃತಿ ಈ ನ್ಯಾಯಾಲಯಕ್ಕೆ ಅಂಚೆ ಇಲಾಖೆಯವರು ಸಲ್ಲಿಸಿರುತ್ತಾರೆ.

ಈ ನಡುವೆ ಈ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ:ಸಿಆರ್–37/14–15, ದಿ:13–11–2014ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ ದಿ:10–12–2014 ರಂದು ಸಾಗರ ವಾರ್ತೆ ಮತ್ತು ಸಾಗರ ಸಂದೇಶ ದಿನಪತ್ರಿಕೆಯಲ್ಲಿ ಮತ್ತು ದಿ:26–02–2014 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ಈ ಪ್ರಕಟಣೆ ದಿನಪತ್ರಿಕೆಯಲ್ಲಿ ಮತ್ತು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ಈ ವಾಹನ ಬಿಡಿಸಿಕೊಳ್ಳುವ ಬಗ್ಗೆ ಹಕ್ಕು ಬಾಧ್ಯತೆಗೆಯ ಅರ್ಜಿ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:31:10:2015ರಂದು ಈ ಮುಂದಿನಂತೆ ವಾದ ಮಂಡಿಸಿ, ಬೀಟೆ ನಾಟಾವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ ಬಗ್ಗೆ ಚೋರಡಿ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ನಂತರ ತನಿಖಾಧಿಕಾರಿ ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ದಾಖಲೆಗಳಿಂದ ಅರಣ್ಯ ಉತ್ಪನ್ನವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಲಭ್ಯವಿದ್ದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಅಲ್ಲದೆ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ)(1) ರ ಪ್ರಕಾರ ನೋಟಿಸ್‌ನ್ನು 30 ದಿನಗಳ ಕಾಲಾವಕಾಶ ನೀಡಿ ದಿ:19–11–2014 ರಂದು ನೋಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ಅದಕ್ಕೆ ಆರ್.ಸಿ. ಮಾಲೀಕರು ದಿ:02–05–2015ರಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಈ ವಾಹನವನ್ನು ಶ್ರೀಪುಟ್ಟಪ್ಪ ಜಾವಗಲ್ ಇವರಿಗೆ ಮಾರಾಟ ಮಾಡಿದ್ದೇನೆಂದು ಈ ವಾಹನದ ಸಂಪೂರ್ಣ ಹಣ ಬಂದಿದೆಂದು ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಂತರ ಹರಾಜು ಮಾಡಲು ಅವರ ತಕರಾರು ಇಲ್ಲವೆಂದು ಲಿಖಿತ ಉತ್ತರ ನೀಡಿರುವುದರಿಂದ ಈ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆನ್ನುವ ಬಗ್ಗೆ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮೋಹನ್ ಎನ್ ಗಂಗೋಳಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು, ಅರಣ್ಯ ಮೊಕದ್ದಮೆ ಸಂಖ್ಯೆ:22/14–15, ದಿ:05–09–2014 ರಂದು ವಶಪಡಿಸಿಕೊಂಡ ವಾಹನ ಮಾರುತಿ ಒಮ್ನಿ ಕೆಎ–02–ಬಿ–4915 ನ್ನು (ಇಂಜಿನ್ ನಂ: **F8-BIN-2258432** ಛಾಸಿಸ್ ನಂ: **ST-91-N-518313)** ಮತ್ತು ಈ ವಾಹನದಲ್ಲಿದ್ದ ಅರಣ್ಯ ಉತ್ಪನ್ನ ಬೀಟೆ ನಾಟಾ 02=0.113 ಎಂ3 ನ್ನು ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 19–12– 2015 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**P.R. 46**
**SC-25**

**ಮೋಹನ್ ಎನ್ ಗಂಗೋಳಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:05/14–15, ದಿನಾಂಕ : 19 : 12 : 2015.**

| | | |
|---|---|---|
| **ಉಪಸ್ಥಿತರು** | :: | ಮೋಹನ್ ಎನ್ ಗಂಗೋಳಿ, ಕ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ,<br>ಹೊಸನಗರ ವಲಯ, ಹೊಸನಗರ.<br>(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು** | :: | ಪತ್ತೆಯಾಗಿಲ್ಲ. |
| **ಭಾದ್ಯತೆದಾರರು** | :: | ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ :–**

ದಿ:29–07–2014 ರಂದು ಮಾರುತಿ ಒಮಿನಿ ನಂ:ಕೆಎ–19–ಎಂ–2925 ರಲ್ಲಿ ಕಾಡುಜಾತಿಯ ನಾಟಾವನ್ನು ಅಕ್ರಮವಾಗಿ ಸಾಗಿಸುತ್ತಿರುವುದನ್ನು ಬಟ್ಟೆಮಲ್ಲಪ್ಪ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:29–07–2014 ರಂದು ಹೊಸನಗರ ವಲಯದ ಬಟ್ಟೆಮಲ್ಲಪ್ಪ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಹೊಸನಗರ ತಾಲ್ಲೂಕು ಕೆರೆಹಳ್ಳಿ ಹೋಬಳಿ ನಂದಿ ಗ್ರಾಮದ ಜೆಡ್ಡಿನಕೊಪ್ಪಕ್ಕೆ ಹೋಗುವ ಗ್ರಾಮ ಪಂಚಾಯಿತಿ ರಸ್ತೆಯಲ್ಲಿ ಗಸ್ತು ಮಾಡುತ್ತಿರುವಾಗ ಒಂದು ಮಾರುತಿ ಒಮಿನಿ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ವಾಹನವನ್ನು 50 ಮೀಟರೆ ದೂರದಲ್ಲಿ ನಿಲ್ಲಿಸಿ, ವಾಹನದಲ್ಲಿದ್ದ

ಆಸಾಮಿಗಳು ವಾಹನದಿಂದ ಇಳಿದು ಕೈಗೆ ಸಿಗದೇ ಕಾಡಿನೊಳಗೆ ಓಡಿ ಪರಾರಿಯಾಗಿರುತ್ತಾರೆ. ವಾಹನ ಪರಿಶೀಲಿಸಲಾಗಿ ನೀಲಿಬಣ್ಣದ ಮಾರುತಿ ಓಮಿನಿ ನಂ:ಕೆಎ–19–ಎಂ–2925 (ಛಾಸ್ಸಿಸ್ ನಂ: ST-91-IN-930325, ಇಂಜಿನ್ ನಂ: ಕಂಡು ಬಂದಿರುವುದಿಲ್ಲ) ಆಗಿರುತ್ತದೆ. ವಾಹನದೊಳಗಡೆ ಗಂಧಗರಿಗೆಯ 4 ತುಂಡುಗಳಿದ್ದು, ಈ ತುಂಡುಗಳಿಗೆ ಇಲಾಖಾ ಛಾಪಾದ ಗುರುತಿರಲಿಲ್ಲ. ಹಾಗೂ ತುಂಡುಗಳನ್ನು ಸಾಗಿಸಲು ರಹದಾರಿ ಇರಲಿಲ್ಲ. ಈ ತುಂಡುಗಳಿಗೆ ನಂಬರ್ ಕೊಟ್ಟು ಅಳತೆ ಮಾಡಲಾಗಿ 04=0.148 ಎಂ3 ಪ್ರಮಾಣವಿರುತ್ತದೆ. ಆದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಮತ್ತು ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 24, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಹೊಸನಗರ ವಲಯದ ಅ.ಮೊ. ಸಂಖ್ಯೆ 11/14–15ನ್ನು ಬಟ್ಟೆಮಲ್ಲಪ್ಪ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ದಾಖಲಿಸಿ, ನಂತರ ವಾಹನದೊಂದಿಗೆ ಎಲ್ಲಾ ದಾಖಲೆಗಳನ್ನು ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ, ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಹೊಸನಗರ ಇವರು ಈ ವಾಹನ ಮತ್ತು ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ ಪ್ರತಿಯ'ಬಿ' ಎಕ್ಸಟ್ರ್ಯಾಕ್ಟ್ ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ: ವಿವ–05/14–15, ದಿ:31–07–2014,ದಿ:06–01–2015ರಂದು ಸಾರಿಗೆ ಅಧಿಕಾರಿ, ಮಂಗಳೂರು ಇವರಿಗೆ ಪತ್ರ ಬರೆದು ಕೋರಲಾಯಿತು. ಅದರಂತೆ ಸಾರಿಗೆ ಅಧಿಕಾರಿ, ಮಂಗಳೂರು ಇವರು ಈ ವಾಹನದ 'ಬಿ' ಎಕ್ಸಟ್ರ್ಯಾಕ್ಟ್‌ನ್ನು ದಿ:19–01–2015 ರಂದು ಈ ನ್ಯಾಯಾಲಯಕ್ಕೆ ಒದಗಿಸಿ, ಈ ವಾಹನದ ಸಿ.ಸಿ.ಯನ್ನು ದಿ:12–03–2014 ರಂದು ಸಾರಿಗೆ ಅಧಿಕಾರಿ, ಉಡುಪಿಗೆ ವರ್ಗಾವಾಗಿದೆಯೆಂದು ನಮೂದಿಸಿರುತ್ತಾರೆ. ಅದರಂತೆ, ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ:ವಿವ–05/14–15, ದಿ:20–01–2015 ರಂದು ಸಾರಿಗೆ ಅಧಿಕಾರಿ, ಉಡುಪಿಗೆ ಪತ್ರ ಬರೆದು ಈ ವಾಹನದ 'ಬಿ' ಎಕ್ಸಟ್ರ್ಯಾಕ್ಟ್‌ನ್ನು ಒದಗಿಸಲು ಕೋರಿದೆ. ಆದರೆ ಇಲ್ಲಿಯವರೆವಿಗೂ ಈ ವಾಹನದ 'ಬಿ' ಎಕ್ಸಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಸಾರಿಗೆ ಅಧಿಕಾರಿ, ಉಡುಪಿಯವರು ಒದಗಿಸಿರುವುದಿಲ್ಲ. ಇದರಿಂದ ಈ ವಾಹನದ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ, 1963 ಸೆಕ್ಷನ್ 71(ಬಿ) (1)ರ ಪ್ರಕಾರ ನೋಟಿಸ್ ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲ. ಮುಂದೆ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಾಗಲಾಗಲೀ, ಹರಾಜಿನಲ್ಲಿ ವಿಲೇ ಮಾಡಿದಾಗಲಾಗಲೀ ಆರ್.ಸಿ. ಮಾಲೀಕರು ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಅವರಂತೆ ಆದೇಶವಾದಲ್ಲಿ ಅದಕ್ಕೆ ಸಾರಿಗೆ ಅಧಿಕಾರಿ, ಉಡುಪಿ ಇವರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ:ಸಿಆರ್–26/14–15, ದಿ:02–09–2014ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ ದಿ:12–09–2014ರಂದು ವಿಜಯ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ದಿ:30–10–2014 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:31–10–2015ರಂದು ಈ ಮುಂದಿನಂತೆ ವಾದ ಮಂಡಿಸಿ, ಗಂಧಗರಿಗೆ ನಾಟಾವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ ಬಗ್ಗೆ ಉಪ ವಲಯ ಅರಣ್ಯಾಧಿಕಾರಿ, ಬಟ್ಟೆಮಲ್ಲಪ್ಪ ಶಾಖೆ ಇವರು ಪತ್ತೆಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ಈ ವಾಹನದ ಮೇಲೆ ಕೇಸು ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯನ್ನು ವಲಯ ಅರಣ್ಯಾಧಿಕಾರಿ, ಹೊಸನಗರ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ದಾಖಲೆಗಳಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನಗಳನ್ನು ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮೋಹನ್ ಎನ್. ಗಂಗೋಳಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ, ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ ಇವರು ಅರಣ್ಯ ಮೊಕದ್ದಮೆ ಸಂಖ್ಯೆ:11/14–15 ರಲ್ಲಿ ಜಪ್ತು ಮಾಡಿದ ವಾಹನ ನೀಲಿಬಣ್ಣದ ಮಾರುತಿ ಓಮಿನಿ ನಂ:ಕೆಎ–19–ಎಂ–2925 (ಛಾಸ್ಸಿಸ್ ನಂ: ST-91-IN-930325, ಇಂಜಿನ್ ನಂ: ಕಂಡು ಬಂದಿರುವುದಿಲ್ಲ) ವನ್ನು ಮತ್ತು ವಾಹನದಲ್ಲಿದ್ದ ಗಂಧಗರಿಗೆ ನಾಟಾ 04=0.148 ಎಂ3 ಯನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 19–12–2015 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**P.R. 47**

**SC-25**

**ಮೋಹನ್ ಎನ್ ಗಂಗೋಳಿ**

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,

ಸಾಗರ ವಿಭಾಗ, ಸಾಗರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3:ಅಮೊ:ವಾಹನ:ವಿವ:31/13–14, ದಿನಾಂಕ : 19 : 12 : 2015.**

**ಉಪಸ್ಥಿತರು** :: ಮೋಹನ್ ಎನ್ ಗಂಗೋಳಿ, ಕ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು** :: ವಲಯ ಅರಣ್ಯಾಧಿಕಾರಿ,
ಆನಂದಪುರ ವಲಯ, ಚೋರಡಿ
(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು** :: ಪತ್ತೆಯಾಗಿರುವುದಿಲ್ಲ.

**ಭಾಧ್ಯತೆದಾರರು** :: ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ :–**

ದಿ:15–02–2014 ರಂದು ಮಾರುತಿ 800 ಕಾರ್ ಸಿಕೆಎಲ್–7570 ರಲ್ಲಿ ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸುತ್ತಿರುವುದನ್ನು ಗೌತಮಪುರ ಶಾಖೆಯ, ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:15–02–2014ರಂದು ಆನಂದಪುರಂ ವಲಯದ ಚೋರಡಿಯ, ಗೌತಮಪುರ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಯಡೇಹಳ್ಳಿ ಕ್ರಾಸ್‌ನಲ್ಲಿ ವಾಹನ ತಪಾಸಣೆ ಮಾಡುತ್ತಿರುವಾಗ ಒಂದು ವಾಹನ ಬಂದಿದ್ದು, ಅದನ್ನು ನಿಲ್ಲಿಸಲು ಬ್ಯಾಟರಿ ಬೆಳಕು ತೋರಿಸಿದರು, ನಿಲ್ಲಸದೇ ಮುಂದೆ ಹೋದಾಗ ಅದನ್ನು ಬೆನ್ನಟ್ಟಿ ಸಾಗರ ತಾಲ್ಲೂಕು ಆನಂದಪುರ ಹೋಬಳಿ ಗೌತಮಪುರ ಗ್ರಾಮದ ಆನಂದಪುರಂ ನಿಂದ ಶಿಕಾರಿಪುರಕ್ಕೆ ಹೋಗುವ ಮುಖ್ಯ ರಸ್ತೆಯ ಅರಳೀಕಟ್ಟೆಯ ಬಳಿ ಹಿಡಿಯಲಾಯಿತು. ಆದರೆ ಆರೋಪಿಗಳು ಕೈಗೆ ಸಿಗದೇ ಪರಾರಿಯಾಗಿರುತ್ತಾರೆ. ನಂತರ ವಾಹನ ಪರಿಶೀಲಿಸಿದಾಗ ಮಾರುತಿ 800 ಕಾರ್ ಸಿಕೆಎಲ್–7570 ಆಗಿದ್ದು, (ಛಾಸಿಸ್ ನಂ: 5B-308-IN-133897, ಇಂಜಿನ್ ನಂ: F8B-IN-173988) ಆಗಿದ್ದು, ವಾಹನದೊಳಗೆ ಮೂರು ಬೀಟೆ ನಾಟಾವಿದ್ದು, ಈ ನಾಟಾಗಳಿಗೆ ಇಲಾಖಾ ಛಾಪಾದ ಗುರುತಿರಲಿಲ್ಲ ಹಾಗೂ ಸಾಗಿಸಲು ರಹದಾರಿ ಇರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ. ನಾಟಾದ ತುಂಡುಗಳಿಗೆ ನಂಬರ್ ಕೊಟ್ಟು, ಅಳತೆಮಾಡಲಾಗಿ 0.229 ಎಂ3 ಪ್ರಮಾಣವಿರುತ್ತದೆ. ವಾಹನ, ಅರಣ್ಯ ಉತ್ಪನ್ನ, ಗ್ಯಾಸ್ ಸಿಲಿಂಡರ್‌ನ್ನು ಪ್ರಥಮ ವರ್ತಮಾನ ವರಧಿ, ಮಹಜರ್ ವರಧಿ, ಜಪ್ತು ವರಧಿಯೊಂದಿಗೆ, ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 33, 62, 71(ಎ) ರಿಂದ (ಜಿ), 104 (ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಆನಂದಪುರ ವಲಯದ ಅ.ಮೊ. ಸಂಖ್ಯೆ 72/13–14, ದಿ:15–02–2014 ರಂದು ಉಪ ವಲಯ ಅರಣ್ಯಧಿಕಾರಿ ಗೌತಮಪುರ ಶಾಖೆ ಇವರು ದಾಖಲಿಸಿರುತ್ತಾರೆ. ನಂತರ ವಾಹನ ಅರಣ್ಯ ಉತ್ಪನ್ನ ಮತ್ತು ದಾಖಲೆಗಳೊಂದಿಗೆ, ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ,ಚೋರಡಿ ಇವರು ವಾಹನವನ್ನು ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ "ಬಿ" ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ:ವಿವ–31/13–14, ರಲ್ಲಿ ದಿ:17–02–2014 ರಂದು ಸಾರಿಗೆ ಅಧಿಕಾರಿ, ಯಶವಂತಪುರ (ಉತ್ತರ), ಬೆಂಗಳೂರು ಇವರಿಗೆ ಪತ್ರ ಬರೆದು ಕೋರಲಾಗಿದೆ. ಅದರಂತೆ ಸಾರಿಗೆ ಅಧಿಕಾರಿ, ಯಶವಂತಪುರ (ಉತ್ತರ), ಬೆಂಗಳೂರು ಇವರು ಸಂಖ್ಯೆ:ಪ್ರಾಸಾಅ/ಬೆಂ(ಉ)/ಸಾರಿಗೇತರ/ಬಿ.ವಹಿ/14–15, ದಿ:14–01–2015ರ ಪತ್ರದಲ್ಲಿ ಈ ನ್ಯಾಯಾಲಯಕ್ಕೆ 21–01–2015 ರಂದು ಒದಗಿಸಿ, ಈ ವಾಹನದ ಸಿ.ಸಿ. ನ್ನು ಸಾರಿಗೆ ಅಧಿಕಾರಿ, ಇಂದಿರಾನಗರ (ಪೂರ್ವ), ಬೆಂಗಳೂರು ಇಲ್ಲಿಗೆ ದಿ:24–11–1995 ರಲ್ಲಿ ವರ್ಗಾಯಿಸಿದ ಬಗ್ಗೆ ವರದಿಸಿರುತ್ತಾರೆ. ಅದರಂತೆ ಬಿ3:ಅಮೊ:ವಾಹನ:ವಿವ–31/13–14, ದಿ:04–02–2015 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಇಂದಿರಾನಗರ (ಪೂರ್ವ) ಬೆಂಗಳೂರು ಇವರಿಗೆ ಪತ್ರ ಬರೆದು ಈ ವಾಹನದ ಬಿ ಎಕ್ಸ್‌ಟ್ರ್ಯಾಕ್ಟ್ ಒದಗಿಸಲು ಕೋರಿದೆ. ಅದರಂತೆ ಈ ವಾಹನದ ಸಿ.ಸಿ. ಯನ್ನು ದಿ:16–01–1996 ರಲ್ಲಿ ಸಾರಿಗೆ ಅಧಿಕಾರಿ, ಜಯನಗರ (ದಕ್ಷಿಣ) ಬೆಂಗಳೂರು ಇವರಿಗೆ ವರ್ಗಾಯಿಸಿದ ಬಗ್ಗೆ ದಿ:16–02–2015ರ ಪತ್ರದಲ್ಲಿ ಈ ನ್ಯಾಯಾಲಯಕ್ಕೆ ತಿಳಿಸಿರುತ್ತಾರೆ. ಈ ವಾಹನದ "ಬಿ"ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಬಿ3:ಅಮೊ:ವಾಹನ:ವಿವ–31/13–14 ದಿ:04–03–2015 ರಂದು ಸಾರಿಗೆ ಅಧಿಕಾರಿ, ಜಯನಗರ (ದಕ್ಷಿಣ), ಬೆಂಗಳೂರು ಇವರಿಗೆ ಪತ್ರ ಬರೆದು ಕೋರಲಾಗಿದೆ. ಆದರೆ ಇಲ್ಲಿಯವರೆವಿಗೂ ಈ ವಾಹನದ 'ಬಿ' ಎಕ್ಸಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಸಾರಿಗೆ ಅಧಿಕಾರಿ, ಜಯನಗರ (ದಕ್ಷಿಣ), ಬೆಂಗಳೂರು ಇವರು ಒದಗಿಸಿರುವುದಿಲ್ಲ. ಇದರಿಂದ ಈ ವಾಹನದ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ, 1963 ಸೆಕ್ಷನ್ 71(ಬಿ) (1)ರ ಪ್ರಕಾರ ನೋಟಿಸ್ ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲ. ಮುಂದೆ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಾಗಲಾಗಲೀ, ಹರಾಜಿನಲ್ಲಿ ವಿಲೇ ಮಾಡಿದಾಗಲಾಗಲೀ ಆರ್.ಸಿ. ಮಾಲೀಕರು ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಅವರಂತೆ ಆದೇಶವಾದಲ್ಲಿ ಅದಕ್ಕೆ ಸಾರಿಗೆ ಅಧಿಕಾರಿ, ಜಯನಗರ (ದಕ್ಷಿಣ), ಬೆಂಗಳೂರು ಇವರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.

ಈ ನಡುವೆ ಈ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ:ಸಿಆರ್–16/14–15, ದಿ:28–05–2014ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು.

ಅದರಂತೆ ದಿ:16–06–2014 ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:19–06–2014 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ಈ ಪ್ರಕಟಣೆ ದಿನಪತ್ರಿಕೆಯಲ್ಲಿ ಮತ್ತು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ಈ ವಾಹನ ಬಿಡಿಸಿಕೊಳ್ಳುವ ಬಗ್ಗೆ ಹಕ್ಕು ಬಾಧ್ಯತೆಗೆಯ ಅರ್ಜಿ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:31:10:2015ರಂದು ವಾದ ಮಂಡಿಸಿ, ಬೀಟೆ ನಾಟಾವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ ಬಗ್ಗೆ ಗೌತಮಪುರ ಶಾಖೆಯ ಉಪ ವಲಯ ಅರಣ್ಯಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ನಂತರ ತನಿಖಾಧಿಕಾರಿ ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ದಾಖಲೆಗಳಿಂದ ಅರಣ್ಯ ಉತ್ಪನ್ನವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಲಭ್ಯವಿದ್ದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮೋಹನ್ ಎನ್ ಗಂಗೋಳಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ,ಚೋರಡಿ ಇವರು, ಅರಣ್ಯ ಮೊಕದ್ದಮೆ ಸಂಖ್ಯೆ:72/13–14 ರಲ್ಲಿ ಜಪ್ತು ಮಾಡಿದ ಮಾರುತಿ 800 ಕಾರ್ ಸಿಕೆಎಲ್–7570 ನ್ನು, (ಛಾಸಿಸ್ ನಂ: **5B-308-IN-133897,** ಇಂಜಿನ್ ನಂ: **F8B-IN-173988), ಗ್ಯಾಸ್ ಸಿಲಿಂಡರ್‌ನ್ನು** ಮತ್ತು ಈ ವಾಹನದಲ್ಲಿದ್ದ ಬೀಟೆ ನಾಟಾ 03=0.229 ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ: 19–12–2015** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**P.R. 48**
**SC-25**

**ಮೋಹನ್ ಎನ್ ಗಂಗೋಳಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:34/13–14, ದಿನಾಂಕ : 19 : 12 : 2015.**

| | | |
|---|---|---|
| **ಉಪಸ್ಥಿತರು** | :: | ಮೋಹನ್ ಎನ್ ಗಂಗೋಳಿ, ಕ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ,<br>ಆನಂದಪುರಂ ವಲಯ, ಚೋರಡಿ.<br>(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು** | :: | (1) ಸಗೀರ್ ಅಹಮದ್ ಯಾನೆ ಡ್ರೈವರ್ ಬಾಬು<br>(2) ತಬರೇಶ್<br>(3) ಬರ್ಕಲೆ |
| **ಭಾದ್ಯತೆದಾರರು** | :: | ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ :–**

ದಿನಾಂಕ : 30–03–2014 ರಂದು ನಂಬರ್ ಇಲ್ಲದ ಮಾರುತಿವ್ಯಾನ್‌ನಲ್ಲಿ ಸಾಗುವಾನಿ ನಾಟಾಗಳನ್ನು ಅಕ್ರಮವಾಗಿ ಸಾಗಿಸುತ್ತಿರುವುದನ್ನು ಹಿರೇಹರಕ ಶಾಖೆಯ, ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:30–03–2014 ರಂದು ಆನಂದಪುರಂ ವಲಯದ ಚೋರಡಿಯ, ಹಿರೇಹರಕ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಡ್ಯಾಂ ಹೊಸೂರು ಬಳಿ ಸಾಗುವಾನಿ ನೆಡುತೋಪಿನ ಹತ್ತಿರ ಬಂದಾಗ, ಒಂದು ವಾಹನಕ್ಕೆ ಬೆಂಕಿ ಹತ್ತಿರುವುದು ಕಂಡು ಬಂದಿತು. ಬೆಂಕಿ ಸಂಪೂರ್ಣ ಆರಿದ ಮೇಲೆ ಪರಿಶೀಲಿಸಲಾಗಿ ವಾಹನ ಸಂಪೂರ್ಣ ಸುಟ್ಟು ಕರಕಲಾಗಿತ್ತು. ಯಾರೋ ದುಷ್ಕರ್ಮಿಗಳು ಅಕ್ರಮವಾಗಿ ಸಾಗುವಾನಿ ನಾಟಾ ಈ ವಾಹನದಲ್ಲಿ ಸಾಗಾಣಿಕೆ ಮಾಡುವಾಗ ಕೆಟ್ಟಿರುವುದರಿಂದ ಇಲಾಖೆಯವರನ್ನು ನೋಡಿ ವಾಹನಕ್ಕೆ ಬೆಂಕಿ ಹಚ್ಚಿ ಪರಾರಿಯಾಗಿರುತ್ತಾರೆ. ಪರಾರಿಯಾದ ಆಸಾಮಿಗಳ ಹೆಸರು ಮತ್ತು ವಿಳಾಸ 1) ಸಗೀರ್ ಅಹಮದ್ ಯಾನೆ ಡ್ರೈವರ್ ಬಾಬು, ವಿನಾಯಕ ನಗರ ಶಿಕಾರಿಪುರ 2) ತಬರೀಶ ಬಿನ್ ಹತೀವುಲ್ಲಾ, ಆಶಾ ಬಡಾವಣೆ ಶಿಕಾರಿಪುರ 3) ಬರ್ಕಲೆ, ಆಶಾ ಬಡಾವಣೆ ಶಿಕಾರಿಪುರ. ಪರಾರಿಯಾದ ಆಸಾಮಿಗಳ ಹೆಸರು ಮತ್ತು ವಿಳಾಸವನ್ನು ವಲಯ ಅರಣ್ಯಧಿಕಾರಿ ದೂರವಾಣಿ ಮೂಲಕ ತಿಳಿಸಿದರು. ವಾಹನದ ಹತ್ತಿರ ಐದು ಸಾಗುವಾನಿ ಮರಗಳನ್ನು ಕಡಿದು

15 ತುಂಡುಗಳಾಗಿ ಪರಿವರ್ತಿಸಿರುತ್ತಾರೆ. ಈ ತುಂಡುಗಳ ಮೇಲೆ ಯಾವುದೇ ಇಲಾಖಾ ಛಾಪಾದ ಗುರುತಿರಲಿಲ್ಲ ಹಾಗೂ ಈ ಮರ ಕಡಿದು ಸಾಗಿಸಲು ರಹದಾರಿ ಇರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ. ಈ ತುಂಡುಗಳಿಗೆ ನಂಬರ್ ಕೊಟ್ಟು, ಈ 15 ತುಂಡುಗಳನ್ನು ಅಳತೆಮಾಡಿದಾಗ 01.017 ಎಂ3 ಪ್ರಮಾಣವಿರುತ್ತದೆ. ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು, ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 24, 62, 71(ಎ), ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಆನಂದಪುರಂ ವಲಯದ ಅ.ಮೊ. ಸಂಖ್ಯೆ 78/13–14ನ್ನು ಉಪ ವಲಯ ಅರಣ್ಯಧಿಕಾರಿ ಹಿರೇಹರಕ ಶಾಖೆ ಇವರು ದಾಖಲಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ದಾಖಲೆಗಳೊಂದಿಗೆ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ,ಚೋರಡಿ ಇವರು ವಾಹನವನ್ನು ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ದಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ "ಬಿ" ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ಪಡೆಯಲು ಈ ವಾಹನದ ನಂಬರ್ ಪ್ಲೇಟ್ ಸುಟ್ಟಿರುವುದರಿಂದ ಯಾವುದೇ ಸಾರಿಗೆ ಅಧಿಕಾರಿಗೆ ಪತ್ರ ಬರೆಯಲು ಈ ನ್ಯಾಯಾಲಯಕ್ಕೆ ಸಾಧ್ಯವಾಗಿರುವುದಿಲ್ಲ. ಆದ್ದರಿಂದ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 71(ಬಿ)(1) ರ ಪ್ರಕಾರ ನೋಟೀಸ್ ನೀಡಲು ಮತ್ತು ಅವರಿಂದ ಉತ್ತರ ಪಡೆಯಲು ಸಾಧ್ಯವಾಗಿರುವುದಿಲ್ಲ.

ಈ ನಡುವೆ ಈ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ:ಸಿಆರ್–16/14–15, ದಿ:28–05–2014ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ ದಿ:16–01–2014ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಿಸಿ ಪ್ರತಿ ನ್ಯಾಯಾಲಯಕ್ಕೆ ಒದಗಿಸಲು ಕೋರಲಾಗಿದೆ. ಅದರಂತೆ ದಿ:10–06–2014 ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:19–06–2014 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ಈ ಪ್ರಕಟಣೆ ದಿನಪತ್ರಿಕೆಯಲ್ಲಿ ಮತ್ತು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ಈ ವಾಹನ ಬಿಡಿಸಿಕೊಳ್ಳುವ ಬಗ್ಗೆ ಹಕ್ಕು ಬಾಧ್ಯತೆಗೆಯವರು ಅರ್ಜಿ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:31:10:2015ರಂದು ವಾದ ಮಂಡಿಸಿ, ಸಾಗುವಾನಿ ನಾಟಾವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ ಬಗ್ಗೆ ಚೋರಡಿ ಶಾಖೆಯ ಉಪ ವಲಯ ಅರಣ್ಯಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ನಂತರ ವಿಚಾರಣಾಧಿಕಾರಿ ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ದಾಖಲೆಗಳಿಂದ ಅರಣ್ಯ ಉತ್ಪನ್ನವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಲಭ್ಯವಿದ್ದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮೋಹನ್ ಎನ್ ಗಂಗೋಳಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ,ಚೋರಡಿ ಇವರ ಅರಣ್ಯ ಮೊಕದ್ದಮೆ ಸಂಖ್ಯೆ:78/13–14 ರಲ್ಲಿ ಜಪ್ತು ಮಾಡಿದ ಸುಟ್ಟಿರುವ ಮಾರುತಿ ಓಮಿನಿ ನಂಬರ್ ಕಾಣಿಸಿರುವುದಿಲ್ಲ (ಚಾಸಿಸ್ ನಂ: ಕಾಣಿಸಿಲ್ಲ, ಇಂಜಿನ್ ನಂ: ಕಾಣಿಸಿಲ್ಲ) ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ನಾಟಾ 15=1.017 ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ: 19–12–2015** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**P.R. 49**

**SC-25**

**ಮೋಹನ್ ಎನ್ ಗಂಗೋಳಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:75/12–13, ದಿನಾಂಕ : 19 : 12 : 2015.**

**ಉಪಸ್ಥಿತರು** :: ಮೋಹನ್ ಎನ್ ಗಂಗೋಳಿ, ಕ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು** :: ವಲಯ ಅರಣ್ಯಾಧಿಕಾರಿ,
ಆನವಟ್ಟಿ ವಲಯ, ಆನವಟ್ಟಿ,
(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು** :: ಪತ್ತೆಯಾಗಿಲ್ಲ.

**ಭಾದ್ಯತೆದಾರರು** :: ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ :–**

ದಿ:07–09–2012 ರಂದು ಟಿ.ವಿ.ಎಸ್. ಸ್ಟಾರ್ ಸಿಟಿ ಬೈಕ್ ನಂ:ಕೆಎ–15–ಕ್ಯೂ–1574 ರಲ್ಲಿ ಸಾಗುವಾನಿ ನಾಟಾಗಳನ್ನು ಅಕ್ರಮವಾಗಿ ಸಾಗಿಸಲು ಪ್ರಯತ್ನಿಸುತ್ತಿರುವಾಗ ತವನಂದಿ ಶಾಖೆ, ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ಸೊರಬ ತಾಲ್ಲೂಕು, ಕುಪ್ಪಗಡ್ಡೆ ಹೋಬಳಿ, ತೆಕ್ಕೂರು ಗ್ರಾಮದ ಸ.ನಂ:95 ರಲ್ಲಿದ್ದ ಒಂದು ಸಾಗುವಾನಿ ಮರವನ್ನು ದಿ:05–09–2012 ರಂದು ರಾತ್ರಿ ಯಾರೋ ದುಷ್ಕರ್ಮಿಗಳು ಕಡಿದು ನಾಲ್ಕು ತುಂಡುಗಳಾಗಿ ಪರಿವರ್ತಿಸಿದ ಬಗ್ಗೆ ಮತ್ತು ಸ್ಥಳದಲ್ಲಿ ಟಿ.ವಿ.ಎಸ್. ಸ್ಟಾರ್ ಸಿಟಿ ಬೈಕ್ ಕೆಎ–15–ಕ್ಯೂ–1574ನ್ನು ನಿಲ್ಲಿಸಿ ಓಡಿ ಹೋಗಿರುತ್ತಾರೆಂದು ಕೊಳಗಿ ಗ್ರಾಮದ ದ್ಯಾವಪ್ಪ ಮತ್ತು ಮಂಜಪ್ಪ ತಿಳಿಸಿದರೆಂದು ಮತ್ತು ಸ್ಥಳ ಪರಿಶೀಲಿಸಿ ಕೇಸು ದಾಖಲಿಸಲು, ಈ ನಾಟಾಗಳು ನನ್ನ ಹಿಡುವಳಿ ಜಾಗದಲ್ಲಿದ್ದ ಮರಗಳಿಂದ ಯಾರೋ ದುಷ್ಕರ್ಮಿಗಳು ತಯಾರಿಸಿರುವುದರಿಂದ ನಾಟಾವನ್ನು ಸ್ವಂತ ಉಪಯೋಗಕ್ಕೆ ಬಿಟ್ಟುಕೊಡಲು ಶ್ರೀ ಎಸ್. ನಾರಾಯಣಪ್ಪ ಬಿನ್ ರಂಗಪ್ಪ, ಸುಮಾರು 58 ವರ್ಷ, ಕೆರೆಹಳ್ಳಿ ಗ್ರಾಮ ವಾಸಿ, ಸೊರಬ ತಾಲ್ಲೂಕು ಇವರು ದಿ:06–09–2012 ರಂದು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಇವರಿಗೆ ದೂರರ್ಜಿ ಸಲ್ಲಿಸಿರುತ್ತಾರೆ. ಇವರ ಅರ್ಜಿಯಂತೆ ದಿ:07–09–2012 ರಂದು ತವನಂದಿ ಶಾಖೆ, ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಘಟನಾ ಸ್ಥಳಕ್ಕೆ ಭೇಟಿ ನೀಡಿ ಪರಿಶೀಲಿಸಿದಾಗ, ಸ್ಥಳದಲ್ಲಿ 1 ಸಾಗುವಾನಿ ಮರದ ಬುಡುವಿದ್ದು, ಅದರಿಂದ 4 ಸಾಗುವಾನಿ ತುಂಡುಗಳಾಗಿ ಪರಿವರ್ತಿಸಿದ್ದು, ಅದರ ಒಟ್ಟು ಅಳತೆ 0.422 ಎಂ3 ಪ್ರಮಾಣವಿರುತ್ತದೆ. ಹಾಗೂ ಈ ತುಂಡುಗಳ ಪಕ್ಕದಲ್ಲಿ ಒಂದು ಟಿ.ವಿ.ಎಸ್. ಸ್ಟಾರ್ ಸಿಟಿ ಕೆಎ–15–ಕ್ಯೂ–1574, 2 ಗರಗಸ, 1 ಟೇಪು ಇದ್ದು, ಈ ವಸ್ತುಗಳನ್ನು ಯಾರೋ ದುಷ್ಕರ್ಮಿಗಳು ಸದರಿ ಮರ ಕಡಿದು ಸಾಗಿಸಲು ಉಪಯೋಗಿಸಿರುವುದು ಕಂಡುಬಂದಿದೆ. ಆರೋಪಿಯು ಪತ್ತೆಯಾಗಿರುವುದಿಲ್ಲವೆಂದು, ಈ ಮರ ಕಡಿಯಲು ಮತ್ತು ಸಾಗಿಸಲು ಯಾವುದೇ ರಹದಾರಿ ಇಲ್ಲದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ, ಗರಗಸ, ಟೇಪು ಮತ್ತು ಸಾಗುವಾನಿ ನಾಟಾಗಳನ್ನು, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು, ಮರ ಸಂರಕ್ಷಣಾ ಕಾಯ್ದೆ, 1976 ಸೆಕ್ಷನ್ 8 ಮತ್ತು 22ರ ಪ್ರಕಾರ ಆನವಟ್ಟಿ ವಲಯದ ಅ.ಮೊ.ಸಂಖ್ಯೆ:75/12–13 ನ್ನು ತವನಂದಿ ಶಾಖೆ, ಉಪ ವಲಯ ಅರಣ್ಯಾಧಿಕಾರಿ ದಾಖಲಿಸಿ ನಂತರ ವಾಹನ ಮತ್ತು ಅರಣ್ಯ ಉತ್ಪನ್ನಗಳನ್ನು ದಾಖಲೆಗಳೊಂದಿಗೆ ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಇವರು ವಾಹನವನ್ನು ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ 'ಬಿ' ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ವಿಚಾರಣಾಧಿಕಾರಿ ಹಾಗೂ ವಲಯ ಅರಣ್ಯಾಧಿಕಾರಿ ಆನವಟ್ಟಿ ವಲಯ ಇವರು ಸಂಖ್ಯೆ:ವಅಅ:ಆವ:–627/12–13 ದಿ:07–09–2012 ರಂದು ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಪತ್ರ ಬರೆದು ಕೋರಿರುತ್ತಾರೆ. ಅದರಂತೆ ಸಾರಿಗೆ ಅಧಿಕಾರಿ, ಸಾಗರ ಇವರು ಈ ವಾಹನದ 'ಬಿ' ಎಕ್ಸಟ್ರ್ಯಾಕ್ಟ್‌ನ್ನು ದಿ:10–09–2012 ರಂದು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಇವರಿಗೆ ಒದಗಿಸಿರುತ್ತಾರೆ. ಸದರಿ 'ಬಿ' ಎಕ್ಸಟ್ರ್ಯಾಕ್ಟ್‌ನ್ನು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಇವರು ದಿ:11–02–2014 ರಂದು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. 'ಬಿ' ಎಕ್ಸಟ್ರ್ಯಾಕ್ಟ್‌ನಲ್ಲಿ ನಮೂದಿಸಿದ ಆರ್. ಸಿ. ಮಾಲೀಕರ ಹೆಸರು ಶ್ರೀ ಎಂ.ಆರ್. ವೀರೇಂದ್ರ ಬಿನ್ ಬಂಗಾರಪ್ಪ, ಮುತ್ತಲಬೈಲು, ಬರೂರು, ಸಾಗರ ತಾ. ಆಗಿದ್ದು, ಇವರಿಗೆ ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 71(ಬಿ) (1) ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿನಾಂಕ:14–02–2014 ರಂದು ನೋಟಿಸನ್ನು ನೋಂದಣಿ ಅಂಚೆ, ಮೂಲಕ 30 ದಿನಗಳ ಕಾಲಾವಕಾಶ ನೀಡಿ ಈ ವಾಹನಕ್ಕೆ ಸಂಬಂಧಿಸಿದ ದಾಖಲೆ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಲು ಮತ್ತು ಉತ್ತರಿಸಲು ಈ ನ್ಯಾಯಾಲಯದಿಂದ ಜಾರಿ ಮಾಡಿದೆ. ಆರ್.ಸಿ. ಮಾಲೀಕರು ಇಲ್ಲಿಯವರೆವಿಗೂ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿ ಸಲ್ಲಿಸಿರುವುದಿಲ್ಲ.

ಈ ನಡುವೆ ಈ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಪೇಪರ್ ಪ್ರಕಟಣೆ, ಬಿ3–ಅಮೊ–ವಾಹನ–ಪ್ರಕಟಣೆ:ಸಿಆರ್–26/14–15, ದಿ:02–09–2014ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ದಿ:12–09–2014 ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟಗೊಂಡಿದೆ, ದಿ:30–10–2014 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕು ಬಾಧ್ಯತೆ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:31:10:2015ರಂದು ಈ ಮುಂದಿನಂತೆ ವಾದ ಮಂಡಿಸಿರುತ್ತಾರೆ. ಈ ವಾಹನದಲ್ಲಿ ಸಾಗುವಾನಿ ತುಂಡುಗಳನ್ನು ಅಕ್ರಮವಾಗಿ ಸಾಗಿಸುತ್ತಿರುವಾಗ ತವನಂದಿ ಶಾಖೆಯ, ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ನಂತರ ತನಿಖಾಧಿಕಾರಿ ಈ ಪ್ರಕರಣದ ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ, ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ದಾಖಲೆಗಳಿಂದ ಅರಣ್ಯ ಉತ್ಪನ್ನವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಲಭ್ಯವಿದ್ದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು ಮತ್ತು ಆರ್.ಸಿ.ಮಾಲೀಕರಿಗೆ ನೋಟೀಸ್ ನೀಡಿ 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದರಿಂದ. ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮೋಹನ್ ಎನ್. ಗಂಗೋಳಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ

ಇಲ್ಲಿವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ, ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಇವರು ಅರಣ್ಯ ಮೊಕದ್ದಮೆ 75/12–13ರಲ್ಲಿ ಜಪ್ತು ಮಾಡಿದ ವಾಹನ ಟಿ.ವಿ.ಎಸ್. ಸ್ಟಾರ್ ಸಿಟಿ ಬೈಕ್ ಕೆಎ–15–ಕ್ಯೂ–1574 (ಛಾಸ್ಸಿಸ್ ನಂ: MD625NF141E28782, ಇಂಜಿನ್ ನಂ: AF1EA1266666) ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ: 19–12–2015** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**P.R. 50**

**SC-25**

**ಮೋಹನ್ ಎನ್ ಗಂಗೋಳಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:28/13–14, ದಿನಾಂಕ : 19 : 12 : 2015.**

| | | |
|---|---|---|
| **ಉಪಸ್ಥಿತರು** | :: | ಮೋಹನ್ ಎನ್ ಗಂಗೋಳಿ, ಕ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಸಾಗರ ವಿಭಾಗ, ಸಾಗರ. |
| **ಫಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ,<br>ನಗರ ವಲಯ, ನಗರ.<br>(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ). |
| **ಆರೋಪಿಗಳು** | :: | (1) ಪ್ರದೀಪ್ 2) ನಾಗೇಂದ್ರ ಕೆ.ಎಸ್<br>3) ಸುರೇಶ ಯಾನೇ ಗುಂಡ 4) ಪ್ರಕಾಶ್ |
| **ಭಾದ್ಯತೆದಾರರು** | :: | ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ :–**

ದಿ:29–12–2013 ರಂದು ಟಾಟಾ ಏಸ್ ವಾಹನ ಸಂಖ್ಯೆ:ಕೆಎ–19–ಟಿಆರ್–9892 ರಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಿಸುತ್ತಿರುವಾಗ ಮತ್ತಿಮನೆ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:29–12–2013 ರಂದು ನಗರ ವಲಯದ, ಮತ್ತಿಮನೆ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರಿಗೆ ಖಚಿತ ವರ್ತಮಾನದ ಮೇರೆಗೆ ಹೊಸನಗರ ತಾಲ್ಲೂಕು, ನಗರ ಹೋಬಳಿ, ಮತ್ತಿಕೈ ಗ್ರಾಮದ ಸ.ನಂ:147ರಲ್ಲಿ ಗಸ್ತು ಕಾಯುತ್ತಿರುವಾಗ ಕಾಡಿನಿಂದ ಒಂದು ವಾಹನದಲ್ಲಿ ಅರಣ್ಯ ಉತ್ಪನ್ನ ಸಾಗಿಸುತ್ತಿರುವುದು ಕಂಡು ಬಂದಿತು. ಹತ್ತಿರ ಹೋಗುವಷ್ಟರಲ್ಲಿ, ವಾಹನದಲ್ಲಿದ್ದ 4 ಜನ ಆಸಾಮಿಗಳು ವಾಹನದಿಂದ ಇಳಿದು ವಾಹನ ಬಿಟ್ಟು ಓಡಲಾರಂಭಿಸಿದರು, ಅದರಲ್ಲಿ ಇಬ್ಬರನ್ನು ಹಿಡಿಯಲು ಸಾಧ್ಯವಾಗಿದ್ದು, 2 ಜನ ಆಸಾಮಿಗಳು ಕೈಗೆ ಸಿಗದೇ ಪರಾರಿಯಾದರು. ವಾಹನ ಪರಿಶೀಲಿಸಲಾಗಿ ಟಾಟಾ ಏಸ್ ಕೆಎ–19–ಟಿಆರ್–9892 (ಛಾಸ್ಸಿಸ್ ನಂ: MAT445056DZB15588 ಇಂಜಿನ್ ನಂ: 275101016BWYS41338) ಆಗಿದ್ದು,ವಾಹನದೊಳಗೆ ಹಸಿಯಾದ 3 ಬೀಟೆ ನಾಟಾಗಳಿದ್ದು, ಈ ನಾಟಾಗಳಿಗೆ ಇಲಾಖಾ ಛಾಪಾದ ಗುರುತು ಕಂಡುಬಂದಿರುವುದಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಬೀಟೆ ನಾಟಾಕ್ಕೆ ನಂಬರ್ ಕೊಟ್ಟು ಮತ್ತು ಅಳತೆ ಮಾಡಲಾಗಿ 03=0.330 ಎಂ3 ಪ್ರಮಾಣವಿದ್ದು, ಪ್ರಥಮ ವರ್ತಮಾನ ವರಧಿ, ಮಹಜರ್ ವರಧಿ, ಜಪ್ತು ವರಧಿಯೊಂದಿಗೆ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು, ಆರೋಪಿಗಳನ್ನು ಇಲಾಖಾ ಪರ ವಶಪಡಿಸಿಕೊಂಡು, ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 24(d)(e), 50, (2)(b), 62(1)(2)(3), 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 127(ಎ), 144, 165ರ ಪ್ರಕಾರ ನಗರ ವಲಯದ ಅ.ಮೊ. ಸಂಖ್ಯೆ 55/13–14ನ್ನು ಉಪ ವಲಯ ಅರಣ್ಯಧಿಕಾರಿ ಮತ್ತಿಮನೆ ಶಾಖೆ ಇವರು ದಾಖಲಿಸಿ, ವಲಯ ಅರಣ್ಯಾಧಿಕಾರಿ, ನಗರ ವಲಯ, ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ನಗರ ವಲಯ ಇವರು ಆರೋಪಿಯನ್ನು ನ್ಯಾಯಾಲಯಕ್ಕೆ ಹಾಜರ್ಪಡಿಸಿ, ವಾಹನವನ್ನು ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ "ಬಿ" ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ:ವಿವ–28/13–14,ದಿ:10–01–2014 ಮತ್ತು ದಿ:06–01–2015 ರಂದು ಸಾರಿಗೆ ಅಧಿಕಾರಿ, ಮಂಗಳೂರು ಇವರಿಗೆ ಪತ್ರ ಬರೆದು ಕೋರಲಾಗಿದೆ. ಅದರಂತೆ ಸಾರಿಗೆ ಅಧಿಕಾರಿ, ಮಂಗಳೂರು ಇವರ ಪತ್ರ ಸಂಖ್ಯೆ:ಪ್ರಾಸಅಕ/ಮಂ/ದ.ಕ./14–15, ದಿನಾಂಕ:21–01–2015ಯನ್ನು ದಿ:16–02–2015ರಂದು ಈ ನ್ಯಾಯಾಲಯಕ್ಕೆ ಈ ವಾಹನದ "ಬಿ"ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ಒದಗಿಸಿರುತ್ತಾರೆ. ಈ "ಬಿ"ಎಕ್ಸಟ್ರ್ಯಾಕ್ಟ್‌ನಲ್ಲಿ ಆರ್.ಸಿ. ಮಾಲೀಕರ ಹೆಸರು ಶ್ರೀ ಪ್ರದೀಪ್ ಕೆ.ಆರ್. ಬಿನ್ ರಾಮಪ್ಪ, ಕೋಲೇಶ್ವರ, ಹಾಲಗುಡ್ಡ (ಅಂಚೆ) ಹೊಸನಗರ (ತಾ) ಇವರಿಗೆ ಕರ್ನಾಟಕ ಅರಣ್ಯ ಕಾಯಿದೆ, 1963 71(ಬಿ)(1) ರ ಪ್ರಕಾರ ನೋಟಿಸನ್ನು ನೋಂದಣಿ ಅಂಚೆ ಮೂಲಕ ಜಾರಿ ಮಾಡಿ 30 ದಿನಗಳ ಕಾಲಾವಕಾಶ ನೀಡಿ, ದಿ:25–02–2015 ರಂದು ಜಾರಿ ಮಾಡಿದ ಲಕೋಟೆ ಮೇಲೆ ಈ ವಿಳಾಸದಾರರು ಮರಣ ಹೊಂದಿರುತ್ತಾರೆಂದು ಅಂಚೆ ಇಲಾಖೆಯವರು ನಮೂದಿಸಿ, ಈ ನ್ಯಾಯಾಲಯಕ್ಕೆ ಹಿಂದಿರುಗಿಸಿರುತ್ತಾರೆ.

ಈ ನಡುವೆ ಈ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ:ಸಿಆರ್–16/2014–15, ದಿ:04–12–2013ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು

ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ ದಿ:10–06–2014ರಂದು ವಿಜಯ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ದಿ:19–06–2014ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಿರಾಗಲೀ, ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:31–10–2015 ರಂದು ವಾದ ಮಂಡಿಸಿ, ಬೀಟೆ ನಾಟಾವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ ಬಗ್ಗೆ ಮತ್ತಿಮನೆ ಶಾಖೆಯ ಉಪ ವಲಯ ಅರಣ್ಯಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ನಂತರ ತನಿಖಾಧಿಕಾರಿ ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ದಾಖಲೆಗಳಿಂದ ಅರಣ್ಯ ಉತ್ಪನ್ನವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಲಭ್ಯವಿರುವ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಹಾಗೂ ಈ ವಾಹನದ ಆರ್.ಸಿ. ಮಾಲೀಕರಿಗೆ ನೋಟೀಸ್ ಜಾರಿ ಮಾಡಿದೆ. ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮೋಹನ್ ಎನ್ ಗಂಗೋಳಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ವಲಯ ಅರಣ್ಯಾಧಿಕಾರಿ, ನಗರ ವಲಯ ಇವರು ಅರಣ್ಯ ಮೊಕದ್ದಮೆಯಲ್ಲಿ (ನಗರ ವಲಯದ.ಮೊ.ಸಂಖ್ಯೆ 55/13–14) ಜಪ್ತು ಮಾಡಿದ ವಾಹನ ಟಾಟಾ ಏಸ್ ಸಂಖ್ಯೆ: ಕೆಎ–19–ಟಿಆರ್–9892 ಆಗಿದ್ದು, (ಛಾಸ್ಸಿಸ್ ನಂ: MAT445056DZB15588 ಇಂಜಿನ್ ನಂ: 275101016BWYS41338)ನ್ನು ಮತ್ತು ಈ ವಾಹನದಲ್ಲಿದ್ದ ಬೀಟೆ ನಾಟಾ 3=0.330ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 19–12–2015 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

P.R. 51
SC-25

**ಮೋಹನ್ ಎನ್ ಗಂಗೋಳಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ.

**ಬಿ3:ಅಮೊ:ವಾಹನ:ವಿವ:03/14–15, ದಿನಾಂಕ : 19 : 12 : 2015.**

| | | |
|---|---|---|
| **ಉಪಸ್ಥಿತರು** | :: | ಮೋಹನ್ ಎನ್ ಗಂಗೋಳಿ, ಕ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಸಾಗರ ವಿಭಾಗ, ಸಾಗರ. |
| **ಫಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ,<br>ಆನವಟ್ಟಿ ವಲಯ, ಆನವಟ್ಟಿ.<br>(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು** | :: | 1) ದಾದಾ ಫೀರ್<br>2) ನಯಾಜ್ |
| **ಭಾದ್ಯತೆದಾರರು** | :: | ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ :–**

ದಿ:25–07–2014 ರಂದು ಅಪೇ ಲಗೇಜ್ ಆಟೋ ನಂ:ಕೆಎ–17–9539 ರಲ್ಲಿ ಶ್ರೀಗಂಧದ ತುಂಡುಗಳನ್ನು ಅಕ್ರಮವಾಗಿ ಸಾಗಿಸುತ್ತಿರುವಾಗ ಆನವಟ್ಟಿ ವಲಯದ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:25–07–2014 ರಂದು ಆನವಟ್ಟಿ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ, ಸೊರಬ ತಾಲ್ಲೂಕು ಹಾಯ–ಆನವಟ್ಟಿ ಮುಖ್ಯ ರಸ್ತೆಯ ಹಾಯ ಕ್ರಾಸ್ ಬಳಿ ರಾತ್ರಿ ಕಾಯುತ್ತಿರುವಾಗ, ಕುಪ್ಪಗಡ್ಡೆ ಕಡೆಯಿಂದ ಆನವಟ್ಟಿ ಕಡೆಗೆ ಒಂದು ಅಪೇ ಲಗೇಜ್ ಆಟೋ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ನಿಲ್ಲಿಸದೇ ಮುಂದೇ ವೇಗವಾಗಿ ಚಲಿಸಿತು. ಆ ವಾಹನವನ್ನು ಇಲಾಖಾ ವಾಹನದಲ್ಲಿ ಬೆನ್ನಟ್ಟಿ ಅಪೇ ಲಗೇಜ್ ಆಟೋವನ್ನು ಸುತ್ತುವರಿದು ನಿಲ್ಲಿಸಿ, ವಾಹನದಲ್ಲಿ ಇಬ್ಬರು ಆಸಾಮಿಗಳಿದ್ದರು, ವಾಹನ ಪರಿಶೀಲಿಸಲಾಗಿ ಅಪೇ ಲಗೇಜ್ ಆಟೋ ನಂ: ಕೆಎ–17–9539 ಆಗಿದ್ದು, ವಾಹನದೊಳಗೆ ಮರದ ತುಂಡುಗಳಿದ್ದು, ಅದನ್ನು ಪರಿಶೀಲಿಸಿದಾಗ ಶ್ರೀಗಂಧದ 5 ತುಂಡುಗಳಿದ್ದು, ಈ ತುಂಡುಗಳ ಮೇಲೆ ಇಲಾಖಾ ಛಾಪಾ ಗುರುತು ಇರಲಿಲ್ಲ. ಈ ತುಂಡುಗಳನ್ನು ಸಾಗಿಸಲು ರಹದಾರಿ ಇರಲಿಲ್ಲ. ಇದನ್ನು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಜಪ್ತು ವರದಿಯೊಂದಿಗೆ ವಾಹನ, ಶ್ರೀಗಂಧ ಮತ್ತು ಆಸಾಮಿಗಳನ್ನು ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ

ಅರಣ್ಯ ಕಾಯಿದೆ, 1963 ಸೆಕ್ಷನ್ 33, 80, 84, 86, 87 71(ಎ) ರಡಿ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಆನವಟ್ಟಿ ವಲಯದ ಅ.ಮೊ. ಸಂಖ್ಯೆ: 12/14–15, ದಿ:25–07–2014 ರಂದು ವಲಯ ಅರಣ್ಯಾಧಿಕಾರಿ, ಆನವಟ್ಟಿ ಇವರು ದಾಖಲಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಇವರು ಆಸಾಮಿಗಳನ್ನು ಸೊರಬ ನ್ಯಾಯಾಲಯಕ್ಕೆ ಒಪ್ಪಿಸಿ, ವಾಹನವನ್ನು ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ:ವಿವ–03/14–15, ರಲ್ಲಿ ದಿ:31–07–2014 ರಂದು ಸಾರಿಗೆ ಅಧಿಕಾರಿ, ದಾವಣಗೆರೆ ಇವರಿಗೆ ಪತ್ರ ಬರೆದು ಕೋರಲಾಗಿದೆ. ಅದರಂತೆ ಸಾರಿಗೆ ಅಧಿಕಾರಿ, ದಾವಣಗೆರೆ ಇವರ ಪತ್ರ ಸಂಖ್ಯೆ:ಪ್ರಾಸಾಅ:ದಾವ:ನೋ:ವಿಭಾಗ/14–15, ದಿ:05–08–2014 ರಲ್ಲಿ ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಲಗತ್ತಿಸಿ, ದಿ:13–08–2014ರಂದು ಪ್ರತಿಯನ್ನು ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಈ 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದ ಆರ್. ಸಿ. ಮಾಲೀಕರ ಹೆಸರು ಶ್ರೀ ಜಹೀದ್ ಖಾನ್ ಬಿನ್ ಹಬೀಬ್ ಖಾನ್, #225, ಎಸ್.ಎಸ್.ಎಂ. ನಗರ 'ಬಿ' ಬ್ಲಾಕ್, ರಾಮಕೃಷ್ಣ ಹೆಗಡೆ ಹೌಸ್, ದಾವಣಗೆರೆ ಎಂದು ನಮೂದಿಸಲಾಗಿದೆ. ಈ ಹೆಸರಿನ ವಿಳಾಸಕ್ಕೆ, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ) (1) ರ ಪ್ರಕಾರ ನೋಟಿಸನ್ನು ನೋಂದಣಿ ಅಂಚೆ, ಮೂಲಕ 30 ದಿನಗಳ ಕಾಲಾವಕಾಶ ನೀಡಿ ದಿ:16–09–2014 ರಂದು ಜಾರಿ ಮಾಡಿದೆ. ಜಾರಿ ಮಾಡಿದ ಲಕೋಟೆ ಮೇಲೆ ಅಂಚೆ ಇಲಾಖೆಯವರು (ಇನ್ ಸಫಿಷಿಯೆಂಟ್ ಅಡ್ರೆಸ್ಸ್ ಎಂದು) ನಮೂದಿಸಿ ಹಾಗೇ ಹಿಂದಿರುಗಿಸಿರುತ್ತಾರೆ.

ಈ ನಡುವೆ ಈ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಪೇಪರ್ ಪ್ರಕಟಣೆ, ಬಿ3–ಅಮೊ–ವಾಹನ–ಪ್ರಕಟಣೆ:ಸಿಆರ್–26/14–15, ದಿ:02–09–2014ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ದಿ:12–09–2014 ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟಗೊಂಡಿದೆ, ದಿ:30–10–2014 ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕು ಬಾಧ್ಯತೆ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:31:10:2015ರಂದು ವಾದ ಮಂಡಿಸಿರುತ್ತಾರೆ. ಈ ವಾಹನದಲ್ಲಿ ಶ್ರೀಗಂಧದ ತುಂಡುಗಳನ್ನು ಅಕ್ರಮವಾಗಿ ಸಾಗಿಸುತ್ತಿರುವಾಗ ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ನಂತರ ತನಿಖಾಧಿಕಾರಿ ಈ ಪ್ರಕರಣದ ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ, ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ದಾಖಲೆಗಳಿಂದ ಅರಣ್ಯ ಉತ್ಪನ್ನವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಲಭ್ಯವಿದ್ದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದರಿಂದ. ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮೋಹನ್ ಎನ್. ಗಂಗೋಳಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ, ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಇವರು ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಅಪೇ ಲಗೇಜ್ ಆಟೋ ಕೆಎ–17–9539, (ಛಾಸ್ಸಿಸ್ ನಂ: ಕಾಣಿಸುತ್ತಿಲ್ಲ, ಇಂಜಿನ್ ನಂ: ಕಾಣಿಸುತ್ತಿಲ್ಲ) ರಲ್ಲಿ ಮತ್ತು 05 ಶ್ರೀಗಂಧದ ತುಂಡುಗಳ ತೂಕ 39 ಕೆ.ಜಿ. ತೂಕ ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 19–12–2015 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

P.R. 52
SC-25

**ಮೋಹನ್ ಎನ್ ಗಂಗೋಳಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:09/14–15, ದಿನಾಂಕ : 19 : 12 : 2015.**

| | | |
|---|---|---|
| **ಉಪಸ್ಥಿತರು** | :: | ಮೋಹನ್ ಎನ್ ಗಂಗೋಳಿ, ಕ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ,<br>ಶಿರಾಳಕೊಪ್ಪ ವಲಯ, ಶಿರಾಳಕೊಪ್ಪ.<br>(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |

| | | |
|---|---|---|
| **ಆರೋಪಿಗಳು** | :: | 1) ಬಿಳ್ಕಿ ಫಯಾಜ್ ಅಹ್ಮದ್ |
| | | 2) ಅಲ್ತಾಫ್ |
| **ಭಾದ್ಯತೆದಾರರು** | :: | ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ :–**

ದಿ:22–09–2014 ರಂದು ಹಿರೋ ಹೊಂಡಾ ಸ್ಪ್ಲೆಂಡರ್ ಪ್ಲಸ್ ಬೈಕ್ ಕೆಎ–15–ಕ್ಯೂ–1037 ರಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಿಸುತ್ತಿರುವುದನ್ನು, ಶಿರಾಳಕೊಪ್ಪ ವಲಯದ, ನಗರ ತನಿಖೆಯ ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:22–09–2014 ರಂದು ಶಿರಾಳಕೊಪ್ಪ ವಲಯದ ನಗರ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಹಾಗೂ ರಾತ್ರಿ ಗಸ್ತಿನ ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ, ಶಿಕಾರಿಪುರ ತಾಲ್ಲೂಕು ಉಡುಗಣಿ ಹೋಬಳಿ, ಶಿರಾಳಕೊಪ್ಪ ಟೌನ್ ವ್ಯಾಪ್ತಿಗೆ ಒಳಪಡುವ ಹವಾಲ್ದಾರ್ ಅಬ್ದುಲ್ ಹಮೀದ್ ರಸ್ತೆಯಲ್ಲಿರುವ ಬಿಳ್ಕಿ ಫಯಾಜ್ ಅಹ್ಮದ್ ಬಿನ್ ಬಿಳ್ಕಿ ಇಬ್ರಾಹಿಂ ಸಾಬ್ ಇವರ ಮನೆಯ ಎದುರಿಗಿರುವ ರಸ್ತೆಯಲ್ಲಿ ಒಂದು ಹಿರೋ ಹೊಂಡಾ ಸ್ಪ್ಲೆಂಡರ್ ಪ್ಲಸ್ ಬೈಕ್‌ನಲ್ಲಿ ಇಬ್ಬರು ಆಸಾಮಿಗಳು ಬರುತ್ತಿರುವುದನ್ನು ತಡೆದು ನಿಲ್ಲಿಸಲು ಸೂಚಿಸಿದಾಗ ವಾಹನವನ್ನು ಸ್ಥಳದಲ್ಲೇ ಬಿಟ್ಟು ಆಸಾಮಿಗಳು ಓಡಲು ಪ್ರಾರಂಭಿಸಿದರು, ಆಸಾಮಿಗಳನ್ನು ಬೆನ್ನಟ್ಟಿದರು ಕೈಗೆ ಸಿಗದೆ ಪರಾರಿಯಾದರು. ಓಡಿ ಹೋದವರ ಹೆಸರು (1) ಬಿಳ್ಕಿ ಫಯಾಜ್ ಅಹ್ಮದ್ ಅಲಿಯಾಸ್ ಮುನ್ನಾ ಬಿನ್ ಬಿಳ್ಕಿ ಇಬ್ರಾಹಿಂ ಸಾಬ್, 38 ವರ್ಷ, (2) ಅಲ್ತಾಫ್ ಬಿನ್ ಹಜ್ರತ್ ಉಮ್ಮರ್ ಇವರಿಬ್ಬರು ಹವಾಲ್ದಾರ್ ಅಬ್ದುಲ್ ಹಮೀದ್ ರಸ್ತೆ, ಶಿರಾಳಕೊಪ್ಪ, ಶಿಕಾರಿಪುರ ತಾಲ್ಲೂಕಿನವರಾಗಿದ್ದು, ನಂತರ ವಾಹನ ಪರಿಶೀಲಿಸಲಾಗಿ ಕಪ್ಪು ಬಣ್ಣದ ಹಿರೋ ಹೊಂಡಾ ಸ್ಪ್ಲೆಂಡರ್ ಪ್ಲಸ್ ಬೈಕ್ ಕೆಎ–15–ಕ್ಯೂ–1037 (ಛಾಸಿಸ್ ನಂ: MBLHA10EE9D10476 ಇಂಜಿನ್ ನಂ: HA10EAA9D78283) ಆಗಿದ್ದು, ವಾಹನದ ಮೇಲಿದ್ದ 5 ಬೀಟೆ ನಾಟಾಗಳಿದ್ದು, ಈ ತುಂಡುಗಳ ತುದಿ ಬುಡದಲ್ಲಿ ಇಲಾಖಾ ಛಾಪಾದ ಗುರುತಿರಲಿಲ್ಲ. ಈ ತುಂಡುಗಳನ್ನು ಸಾಗಿಸಲು ರಹದಾರಿ ಇರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಈ ತುಂಡುಗಳಿಗೆ ಸಂಖ್ಯೆ ಕೊಟ್ಟು, ಈ ತುಂಡುಗಳನ್ನು ಅಳತೆ ಮಾಡಲಾಗಿ, 03=0.120 ಎಂ3 ಪ್ರಮಾಣವಿರುತ್ತದೆ. ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿಯೊಂದಿಗೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಜಪ್ತು ಮಾಡಿಕೊಂಡು ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 62, 71(ಎ) 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು, 1969ರ ಉಪ ನಿಯಮ 144,165ರ ಪ್ರಕಾರ ಶಿರಾಳಕೊಪ್ಪ ವಲಯದ ಅ.ಮೊ.ಸಂಖ್ಯೆ:18/14–15 ನ್ನು ಶಿರಾಳಕೊಪ್ಪ ನಗರ ತನಿಖೆಯ ಉಪ ವಲಯ ಅರಣ್ಯಾಧಿಕಾರಿ, ದಾಖಲಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ದಾಖಲೆಗಳೊಂದಿಗೆ, ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ ಇವರು ವಾಹನವನ್ನು ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ "ಬಿ" ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ:ವಿವ–09/14–15, ದಿ: 20–10–2014 ರಂದು ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಪತ್ರ ಬರೆದು ಕೋರಿದೆ. ಅದರಂತೆ, ಸಾರಿಗೆ ಅಧಿಕಾರಿ, ಸಾಗರ ಇವರು ಈ ವಾಹನದ "ಬಿ" ಎಕ್ಸಟ್ರ್ಯಾಕ್ಟ್‌ನ್ನು ದಿ:20–11–2015ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ "ಬಿ" ಎಕ್ಸಟ್ರ್ಯಾಕ್ಟ್‌ನಲ್ಲಿ ಆರ್.ಸಿ. ಮಾಲೀಕರ ಹೆಸರು ಶ್ರೀ M R Altaf s/o Hazarat Ummar, Hawaldar Abdul Hameed Road, Shiralakoppa (AT & PO), Shikaripur (TQ), Shivamogga (D) ಎಂದು ನಮೂದಾಗಿರುತ್ತದೆ. ಅದರಂತೆ ಈ ಹೆಸರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ)(1) ರ ಪ್ರಕಾರ ನೋಟಿಸ್‌ನ್ನು 30 ದಿನಗಳ ಕಾಲಾವಕಾಶ ನೀಡಿ, ದಿ:21–11–2014ರಂದು ನೋಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ನೋಟೀಸ್ ಜಾರಿ ಮಾಡಿದ ಬಗ್ಗೆ ಸ್ವೀಕೃತಿಯನ್ನು ಅಂಚೆ ಇಲಾಖೆಯವರು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ.

ಈ ನಡುವೆ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3/ಅಮೊ/ವಾಹನ/ ಪ್ರಕಟಣೆ/ಸಿಆರ್–37/14–15 ದಿ:13–11–2014 ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ ದಿ:10–12–2014 ರಂದು ಸಾಗರ ವಾರ್ತೆ, ಸಾಗರ ಸಂದೇಶ ದಿನಪತ್ರಿಕೆಯಲ್ಲಿ ಮತ್ತು ದಿ:26–02–2015 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ಈ ಪ್ರಕಟಣೆ ದಿನಪತ್ರಿಕೆಯಲ್ಲಿ ಮತ್ತು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ಈ ವಾಹನ ಬಿಡಿಸಿಕೊಳ್ಳುವ ಬಗ್ಗೆ ಹಕ್ಕು ಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:–31–10–2015ರಂದು ವಾದ ಮಂಡಿಸಿ, ಬೀಟೆ ಸೈಜ್‌ಗಳನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ ಬಗ್ಗೆ ಶಿರಾಳಕೊಪ್ಪ ವಲಯದ ನಗರ ತನಿಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ನಂತರ ವಿಚಾರಣಾಧಿಕಾರಿ ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ದಾಖಲೆಗಳಿಂದ ಅರಣ್ಯ ಉತ್ಪನ್ನವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದರಿಂದ. ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮೋಹನ್ ಎನ್ ಗಂಗೋಳಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ

ಇಲ್ಲಿವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ, ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ ಇವರು ಅ.ಮೊ.ಸಂಖ್ಯೆ:18/14–15ರಲ್ಲಿ ವಶಪಡಿಸಿಕೊಂಡ ವಾಹನ ಕಪ್ಪು ಬಣ್ಣದ ಹಿರೋ ಹೊಂಡಾ ಸ್ಪ್ಲೆಂಡರ್ ಪ್ಲಸ್ ನಂ: ಕೆಎ–15–ಕ್ಯೂ–1037 (ಛಾಸಿಸ್ ನಂ: MBLHA10EE9D10476 ಇಂಜಿನ್ ನಂ: HA10EAA9D78283) ಮತ್ತು ಬೀಟೆ ನಾಟಾ 03=0.120 ಎಂ3 ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 19–12–2015 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**P.R. 53**

**SC-25**

**ಮೋಹನ್ ಎನ್ ಗಂಗೋಳಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:10/14–15, ದಿನಾಂಕ : 19 : 12 : 2015.**

| | | |
|---|---|---|
| **ಉಪಸ್ಥಿತರು** | :: | ಮೋಹನ್ ಎನ್ ಗಂಗೋಳಿ, ಕ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಸಾಗರ ವಿಭಾಗ, ಸಾಗರ. |
| **ಫಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ,<br>ಶಿರಾಳಕೊಪ್ಪ ವಲಯ, ಶಿರಾಳಕೊಪ್ಪ.<br>(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು** | :: | 1) ಹಸನ್ ಸಾಬ್ 2) ಬಲೀಂ ಎಲ್ಲಾ,<br>3) ತೋಹೀದ್ 4) ಅಮ್ಜದ್ 5) ಅತಿಕ್ |
| **ಭಾದ್ಯತೆದಾರರು** | :: | ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ :–**

ದಿ:05–10–2014 ರಂದು ಯಮಹಾ ಕ್ರಕ್ಸ್ ಬೈಕ್ ಕೆಎ–16–ಕೆ–1183 ಮತ್ತು ಹೀರೋ ಹೋಂಡಾ ಬೈಕ್ ನಂ: ಜಿಎ–07–ಎ–3820 ರಲ್ಲಿ ಶ್ರೀಗಂಧದ ತುಂಡು ಅಕ್ರಮವಾಗಿ ಸಾಗಿಸುತ್ತಿರುವುದನ್ನು, ಶಿರಾಳಕೊಪ್ಪ ವಲಯದ, ಇಂಡುವಳ್ಳಿ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ

ದಿ:05–10–2014 ರಂದು ಶಿರಾಳಕೊಪ್ಪ ವಲಯದ ಇಂಡುವಳ್ಳಿ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ, ಶಿಕಾರಿಪುರ ತಾಲ್ಲೂಕು ಉಡುಗಣಿ ಹೋಬಳಿ, ತಡಗಣಿ ಗ್ರಾಮ ಅರಣ್ಯ ತನಿಖಾ ಠಾಣೆಯ ಬಳಿ ಕಾಯುತ್ತಿರುವಾಗ ಸುಮಾರು 4.00 ಗಂಟೆ ಸಮಯದಲ್ಲಿ ಇಂಡುವಳ್ಳಿ ಕಡೆಯಿಂದ ಶಿಕಾರಿಪುರದ ಕಡೆದ ಬರುತ್ತಿದ್ದ ಎರಡು ಬೈಕ್‌ಗಳನ್ನು ತಪಾಸಣೆಗೆ ನಿಲ್ಲಿಸಲು ಸೂಚಿಸಿದಾಗ ಬೈಕ್‌ನಲ್ಲಿದ್ದ ಆಸಾಮಿಗಳು ಎರಡು ಬೈಕ್‌ಗಳನ್ನು ಸ್ವಲ್ಪ ದೂರದಲ್ಲಿ ಬಿಟ್ಟು ಓಡಲು ಪ್ರಯತ್ನಿಸಿದಾಗ, ಒಬ್ಬ ಆಸಾಮಿಯನ್ನು ಶಾಖಾ ಉಪ ವಲಯ ಅರಣ್ಯಾಧಿಕಾರಿ ಶ್ರೀಕಾಸಿಂ ಸಾಬ್ ಹಿಡಿದಿದ್ದು, ಉಳಿದವರು ಓಡಿ ಕೈಗೆ ಸಿಗದೆ ಪರಾರಿಯಾಗಿರುತ್ತಾರೆ. ಹಿಡಿದ ಆಸಾಮಿಯನ್ನು ವಿಚಾರಿಸಿ 2 ಬೈಕ್ ಮೇಲಿದ್ದ ಚೀಲ ಬಿಚ್ಚಿ ನೋಡಿದಾಗ ಶ್ರೀಗಂಧದ ತುಂಡುಗಳಿದ್ದು, ಈ ತುಂಡುಗಳ ತುದಿ ಬುಡದಲ್ಲಿ ಇಲಾಖಾ ಛಾಪಾದ ಗುರುತಿರಲಿಲ್ಲ. ಈ ತುಂಡುಗಳನ್ನು ಸಾಗಿಸಲು ರಹದಾರಿ ಮತ್ತು ಹೆಸರು ವಿಚಾರಿಸಲಾಗಿ ಹಸನ್ ಬಿನ್ ಮರ್ದನ್ ಸಾಬ್, ತಲದ್ದೆ, 25 ವರ್ಷ, ಜನತಾ ಕೇರಿ, ಚಿಕ್ಕಜಂಬೂರು ವಾಸಿ, ಶಿಕಾರಿಪುರ ತಾಲ್ಲೂಕು ಎಂದು ಮತ್ತು ಓಡಿ ಹೋದ ಆಸಾಮಿಗಳ ಹೆಸರು (1) ಕಲೀಂವುಲ್ಲಾ ಬಿನ್ ಮಹಿಬೂಬ್, 35 ವರ್ಷ, ಜನತಾಕೇರಿ, ಚಿಕ್ಕಜಂಬೂರು ವಾಸಿ, ಶಿಕಾರಿಪುರ ತಾಲ್ಲೂಕು (2) ತೊಹೀದ್ ಬಿನ್ ಸೂಪದ್‌ಸಾಬ್, 32 ವರ್ಷ, ಪಟೇಲ್ ಮೊಹಿಲ್ಲಾ ಕೇರಿ, ಚಿಕ್ಕ ಜಂಬೂರು, ಶಿಕಾರಿಪುರ ತಾಲ್ಲೂಕು (3) ಅತಿಕ್ ಬಿನ್ ಮೆಹಬೂಬ್ ಸಾಬ್, 25 ವರ್ಷ, ಜನತಾಕೇರಿ, ಚಿಕ್ಕಜಂಬೂರು, ಶಿಕಾರಿಪುರ ತಾಲ್ಲೂಕು (4) ಅಮ್‌ಜದ್‌ಖಾನ್ ಬಿನ್ ಗೌಶನ್‌ಸಾಬ್, 28 ವರ್ಷ, ಪಟೇಲ್ ಮೊಹಲ್ಲಾ ಕೇರಿ, ಚಿಕ್ಕ ಜಂಬೂರು, ಶಿಕಾರಿಪುರ ತಾಲ್ಲೂಕು ಎಂದು, ರಹದಾರಿ ಇಲ್ಲವೆಂದು ತಿಳಿಸಿದ ಮೇರೆಗೆ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಶ್ರೀಗಂಧ ಮತ್ತು ಆಸಾಮಿಯನ್ನು ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿಯೊಂದಿಗೆ ಇಲಾಖಾ ಪರ ಜಪ್ತು ಮಾಡಿ ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 24, 62, 84, 86 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪ ನಿಯಮ 144, 165ರ ಪ್ರಕಾರ ಶಿರಾಳಕೊಪ್ಪ ವಲಯದ ಅ.ಮೊ.ಸಂಖ್ಯೆ:22/14–15ನ್ನು ಇಂಡುವಳ್ಳಿ ಶಾಖೆಯ ಉಪ ವಲಯ ಅರಣ್ಯಾಧಿಕಾರಿ, ದಾಖಲಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ದಾಖಲೆಗಳೊಂದಿಗೆ, ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ ಇವರು ವಾಹನವನ್ನು ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ "ಬಿ" ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ:ವಿವ–10/14–15, ದಿ: 20–10–2014 ರಂದು ಸಾರಿಗೆ ಅಧಿಕಾರಿ, ಚಿತ್ರದುರ್ಗ ಇವರಿಗೆ ಪತ್ರ ಬರೆದು ಕೋರಿದೆ. ಅದರಂತೆ, ಸಾರಿಗೆ ಅಧಿಕಾರಿ, ಚಿತ್ರದುರ್ಗ ಇವರು ಈ ವಾಹನದ "ಬಿ" ಎಕ್ಸಟ್ರ್ಯಾಕ್ಟ್‌ನ್ನು ದಿ:22–03–2015ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ "ಬಿ" ಎಕ್ಸಟ್ರ್ಯಾಕ್ಟ್‌ನಲ್ಲಿ ಆರ್.ಸಿ. ಮಾಲೀಕರ ಹೆಸರು ಶ್ರೀ ದೇವರಾಜ್ ಹೆಚ್. ಬಿನ್ ಹನಮಪ್ಪ # ಟಿ.ಬಿ.ನಗರ, ಹೊಳಲ್ಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಎಂದು ನಮೂದಾಗಿರುತ್ತದೆ. ಅದರಂತೆ ಈ ಹೆಸರಿಗೆ ಕರ್ನಾಟಕ ಅರಣ್ಯ ಕಾಯ್ದೆ, 1963 ಸೆಕ್ಷನ್ 71(ಬಿ)(1) ರ ಪ್ರಕಾರ ನೋಟಿಸ್‌ನ್ನು 30 ದಿನಗಳ ಕಾಲಾವಕಾಶ ನೀಡಿ, ದಿ:31–03–2015ರಂದು ನೋಂದಣಿ

ಅಂಚೆ ಮೂಲಕ ನೋಟೀಸ್ ಜಾರಿ ಮಾಡಿರುತ್ತದೆ. ನೋಟಿಸ್ ಜಾರಿ ಮಾಡಿದ ಬಗ್ಗೆ ಸ್ವೀಕೃತಿಯನ್ನು ಅಂಚೆ ಇಲಾಖೆಯವರು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ.ಅದರಂತೆ ಕೆಎ–16–ಕೆ–1183ರ ಆರ್.ಸಿ.ಮಾಲೀಕರು ದಿ:22–04–2015 ರಂದು ಈ ನ್ಯಾಯಾಲಯಕ್ಕೆ ಪತ್ರ ಬರೆದು ಈ ವಾಹನವನ್ನು ರೂ.12000/– ಕ್ಕೆ ದಿ:24–06–2010 ರಂದು ಶ್ರೀ ಮಹಮದ್ ಯೂಸುಫ್, ಶಿರಾಳಕೊಪ್ಪ ಇವರಿಗೆ ಮಾರಾಟ ಮಾಡಿರುತ್ತೇನೆಂದು ಈ ಬಗ್ಗೆ ಡೆಲಿವರಿ ನೋಟ್ ಸಹಾ ಲಗತ್ತಿಸಿರುತ್ತಾರೆ. ವಾಹನವನ್ನು ಮತ್ತು ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅವರ ತಕರಾರಿಲ್ಲವೆಂದು ತಿಳಿಸಿರುತ್ತಾರೆ.

2ನೇ ವಾಹನ ಹಿರೋ ಹೋಂಡಾ ಕ್ರಕ್ಸ್ ನಂ:ಜಿಎ–07–ಎ–3820 ರ "ಬಿ"ಎಕ್ಸಟ್ರ್ಯಾಕ್ಟ್‌ನ್ನು ಒದಗಿಸಲು ಬಿ3/ಎಫ್‌ಒಸಿ/ವಿಇಹೆಚ್/ಸಿಆರ್–10/14–15 ದಿ:20–10–2014 ರಂದು The Director of Transfer Commissioner, Panaji, Goa ಇವರಿಗೆ ಪತ್ರ ಬರೆದು ಕೋರಿದೆ. ಆದರೆ ಇಲ್ಲಿಯವರೆವಿಗೂ ಈ ವಾಹನ "ಬಿ" ಎಕ್ಸಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಆದ್ದರಿಂದ ಈ ವಾಹನದ ಆರ್.ಸಿ. ಮಾಲೀಕರಿಗೆ ನೋಟೀಸ್ ಜಾರಿ ಮಾಡಲು ಈ ನ್ಯಾಯಾಲಯಕ್ಕೆ ಸಾಧ್ಯವಾಗಿರುವುದಿಲ್ಲ.

ಈ 2 ವಾಹನಗಳ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3/ಅಮೊ/ವಾಹನ/ ಪ್ರಕಟಣೆ/ಸಿಆರ್–37/14–15, ದಿ:13–11–2014 ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ ದಿ:10–12–2014 ರಂದು ಸಾಗರ ವಾರ್ತೆ, ಸಾಗರ ಸಂದೇಶ ದಿನಪತ್ರಿಕೆಯಲ್ಲಿ ಮತ್ತು ದಿ:26–02–2015 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ಈ ಪ್ರಕಟಣೆ ದಿನಪತ್ರಿಕೆಯಲ್ಲಿ ಮತ್ತು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ಈ ವಾಹನ ಬಿಡಿಸಿಕೊಳ್ಳುವ ಬಗ್ಗೆ ಹಕ್ಕು ಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:–31–10–2015ರಂದು ವಾದ ಮಂಡಿಸಿ, ಈ ಎರಡು ಬೈಕ್‌ಗಳನ್ನು ಶ್ರೀಗಂಧದ ಕಳ್ಳಸಾಗಾಣಿಕೆ ಮಾಡುತ್ತಿರುವಾಗ ಇಂಡುವಳ್ಳಿ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ನಂತರ ವಿಚಾರಣಾಧಿಕಾರಿ ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ದಾಖಲೆಗಳಿಂದ ಅರಣ್ಯ ಉತ್ಪನ್ನವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದರಿಂದ ಈ ಪ್ರಕರಣದ ವಿದ್ಯಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮೋಹನ್ ಎನ್ ಗಂಗೋಳಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ, ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ ಇವರುಅ.ಮೊ.ಸಂಖ್ಯೆ:22/14–15ರಲ್ಲಿ ವಶಪಡಿಸಿಕೊಂಡವಾಹನ ಯಮಹಾ ಕ್ರಕ್ಸ್ ನಂ:ಕೆಎ–16–ಕೆ–1183 (ಛಾಸಿಸ್ ನಂ: 01GSTM000191 ಇಂಜಿನ್ ನಂ: STM000191) ಮತ್ತು ಹಿರೋ ಹೋಂಡಾ ಬೈಕ್ ಜಿಎ–07–ಎ–3820 (ಛಾಸಿಸ್ ನಂ: F2R02560000932 ಇಂಜಿನ್ ನಂ: Not Visible) ನ್ನು ಹಾಗೂ ಶ್ರೀಗಂಧದ 11 ತುಂಡುಗಳ ತೂಕ 105 ಕೆ.ಜಿ.ಯನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 19–12–2015 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**P.R. 54**

**SC-25**

**ಮೋಹನ್ ಎನ್ ಗಂಗೋಳಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ.

**ಬಿ3:ಅಮೊ:ವಾಹನ:ವಿವ:13/14–15, ದಿನಾಂಕ : 19 : 12 : 2015.**

| | | |
|---|---|---|
| **ಉಪಸ್ಥಿತರು** | :: | ಮೋಹನ್ ಎನ್ ಗಂಗೋಳಿ, ಕ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಸಾಗರ ವಿಭಾಗ, ಸಾಗರ. |
| **ಫಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ,<br>ಶಿರಾಳಕೊಪ್ಪ ವಲಯ, ಶಿರಾಳಕೊಪ್ಪ.<br>(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ). |
| **ಆರೋಪಿಗಳು** | :: | ಪತ್ತೆಯಾಗಿರುವುದಿಲ್ಲ. |
| **ಭಾದ್ಯತೆದಾರರು** | :: | ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ. |

ಪ್ರಸ್ತಾವನೆ :–

ದಿ:08–11–2014 ರಂದು ಮಾರುತಿ ಸುಜುಕಿ 800 ಕಾರ್ ನಂಬರ್ ಕೆಎ–25–ಎಂ–9236 ರಲ್ಲಿ ಸಾಗುವಾನಿ ನಾಟಾವನ್ನು ಅಕ್ರಮವಾಗಿ ಸಾಗಿಸುತ್ತಿರುವಾಗ ತೊಗರ್ಸಿ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:08–11–2014 ರಂದು ಶಿರಾಳಕೊಪ್ಪ ವಲಯದ ತೊಗರ್ಸಿ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಯವರು ಶಿಕಾರಿಪುರ ತಾಲ್ಲೂಕು ತಾಳಗುಂದ ಹೋಬಳಿ, ತೊಗರ್ಸಿ ಗ್ರಾಮದ ಸ.ನಂ:75ರ ತೊಗರ್ಸಿ ಮನ್ನಾ ಜಂಗಲಿಯ ಸಾಗುವಾನಿ ನೆಡುತೋಪಿನಲ್ಲಿ ಬೆಳಗಿನ ಜಾವ ಸುಮಾರು 5.45ರ ಸಮಯದಲ್ಲಿ ಗಸ್ತು ತಿರುಗುತ್ತಿರುವಾಗ ಒಂದು ವಾಹನಕ್ಕೆ 2 ಜನ ಆಸಾಮಿಗಳು ಮರದ ತುಂಡುಗಳನ್ನು ತುಂಬುತ್ತಿರುವುದು ಕಂಡು ಬಂದಿತು. ದೂರದಿಂದ ಇಲಾಖೆಯವರನ್ನು ನೋಡಿ ಅಸಾಮಿಗಳು ವಾಹನದೊಂದಿಗೆ ಓಡಲು ಪ್ರಾರಂಭಿಸಿದರು, ಕೂಡಲೇ ಇಲಾಖಾ ವಾಹನದೊಂದಿಗೆ ಬೆನ್ನಟ್ಟಿ ಶಿರಾಳಕೊಪ್ಪ ಪಟ್ಟಣದಿಂದ ಶಿಕಾರಿಪುರಕ್ಕೆ ಹೋಗುವ ರಸ್ತೆಯಲ್ಲಿ ಜಿ.ಅರ್.ಐ. ಮೋಟಾರ್ಸ್ ಬಳಿ ಕಾರನ್ನು ನಿಲ್ಲಿಸಿ, ಆಸಾಮಿಗಳು ಕೈಗೆ ಸಿಗದೇ ಪರಾರಿಯಾದರು. ನಂತರ ವಾಹನ ಪರಿಶೀಲಿಸಲಾಗಿ ಮಾರುತಿ ಸುಜುಕಿ 800 ಕಾರ್ ನಂಬರ್ ಕೆಎ–25–ಎಂ–9236 ರಲ್ಲಿ (ಛಾಸಿಸ್ ನಂ: SB-308-IN-1700029 ಇಂಜಿನ್ ನಂ: F-8-BIN-2368158) ಆಗಿದ್ದು, ವಾಹನದೊಳಗೆ 6 ಸಾಗುವಾನಿ ತುಂಡುಗಳಿದ್ದು, ಈ ತುಂಡುಗಳ ತುದಿ ಬುಡದಲ್ಲಿ ಇಲಾಖಾ ಛಾಪಾದ ಗುರುತಿರಲ್ಲಿಲ್ಲ ಅಲ್ಲದೇ ಈ ತುಂಡುಗಳನ್ನು ಸಾಗಿಸಲು ರಹದಾರಿ ಇರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಈ ತುಂಡುಗಳಿಗೆ ಸಂಖ್ಯೆ ಕೊಟ್ಟು, ಈ ತುಂಡುಗಳನ್ನು ಅಳತೆ ಮಾಡಲಾಗಿ, 0.310ಎಂ3 ಪ್ರಮಾಣವಿರುತ್ತದೆ. ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿಯೊಂದಿಗೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಜಪ್ತು ಮಾಡಿಕೊಂಡು ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 24, 62, 71(ಎ) ರಿಂದ (ಜಿ) ಮತ್ತು ಕರ್ನಾಟಕ ಅರಣ್ಯ ಕಾನೂನು, 1969ರ ಉಪ ನಿಯಮ 144, 165ರ ಪ್ರಕಾರ ಶಿರಾಳಕೊಪ್ಪ ವಲಯದ ಅ.ಮೊ.ಸಂಖ್ಯೆ:26/14–15 ನ್ನು ತೊಗರ್ಸಿ ಶಾಖೆಯ ಉಪ ವಲಯ ಅರಣ್ಯಾಧಿಕಾರಿ, ದಾಖಲಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ದಾಖಲೆಗಳೊಂದಿಗೆ, ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ ಇವರು ವಾಹನವನ್ನು ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ "ಬಿ" ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ:ವಿವ–13/14–15, ದಿ: 19–11–2014 ರಂದು ಸಾರಿಗೆ ಅಧಿಕಾರಿ, ಧಾರವಾಡ ಇವರಿಗೆ ಪತ್ರ ಬರೆದು ಕೋರಿದೆ. ಆದರಂತೆ, ಸಾರಿಗೆ ಅಧಿಕಾರಿ, ಧಾರವಾಡ ಇವರು ಈ ವಾಹನದ "ಬಿ" ಎಕ್ಸಟ್ರ್ಯಾಕ್ಟ್‌ನ್ನು ದಿ:27–12–2014ರಂದು ಈ ನ್ಯಾಯಾಲಯಕ್ಕೆ ಒದಗಿಸಿ, ಈ ವಾಹನದ ಸಿ.ಸಿ.ಯನ್ನು ದಿ:24–06–2015 ರಂದು ಸಾರಿಗೆ ಅಧಿಕಾರಿ, ಶಿರಸಿಗೆ ವರ್ಗಾಯಿಸಿದೆ ಎಂದು ವರದಿಸಿರುತ್ತಾರೆ. ಅದರಂತೆ ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ;ವಿವ–13/14–15, ದಿ:31–12–2014 ಮತ್ತು ದಿ:04–02–2015 ರಂದು ಸಾರಿಗೆ ಅಧಿಕಾರಿ, ಶಿರಸಿ ಇವರಿಗೆ ಈ ವಾಹನದ "ಬಿ" ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ಒದಗಿಸಲು ಕೋರಲಾಗಿದೆ. ಈ ವಾಹನದ "ಬಿ" ಎಕ್ಸಟ್ರ್ಯಾಕ್ಟ್‌ನಲ್ಲಿ ಆರ್.ಸಿ. ಮಾಲೀಕರ ಹೆಸರು ಶ್ರೀ ನಾಗೇಂದ್ರ ಪಿ. ನಾಯ್ಕ ಬಿನ್ ಪುಟ್ಟಪ್ಪ, ಬೋರನಗುಡ್ಡೆ, ಮಳಲಗೋನ್, ಮುಮಡಗೋಡು ಎಂದು ನಮೂದಾಗಿರುತ್ತದೆ. ಈ ವಿಳಾಸಕ್ಕೆ ದಿನಾಂಕ:12–02–2015 ರಂದು ಕರ್ನಾಟಕ ಅರಣ್ಯ ಕಾಯ್ದೆ, 1963 ಸೆಕ್ಷನ್ 71(ಬಿ)(1) ರ ಪ್ರಕಾರ ನೋಟಿಸ್‌ನ್ನು 30 ದಿನಗಳ ಕಾಲಾವಕಾಶ ನೀಡಿ, ಅಂಚೆ ಮೂಲಕ ಜಾರಿ ಮಾಡಿರುತ್ತದೆ. ಜಾರಿ ಮಾಡಿದ ನೋಟೀಸ್ ಮೇಲೆ ಸದರಿ ವಿಳಾಸದಾರರು ಸಿಗಲಿಲ್ಲ ವೆಂದು ಅಂಚೆ ಇಲಾಖೆಯವರು ನಮೂದಿಸಿ ಈ ನ್ಯಾಯಾಲಯಕ್ಕೆ ಲಕೋಟಿ ಹಿಂದಿರುಗಿಸಿರುತ್ತಾರೆ. ಇದರಿಂದ ಆರ್.ಸಿ ಮಾಲೀಕರಿಗೆ ನೋಟಿಸ್ ಜಾರಿಯಾಗಿರುವುದಿಲ್ಲ.

ಈ ನಡುವೆ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3/ಅಮೊ/ವಾಹನ/ ಪ್ರಕಟಣೆ/ಸಿಅರ್–37/14–15, ದಿ:13–11–2014 ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ನಿರ್ದೇಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ ದಿ:10–12–2014 ರಂದು ಸಾಗರ ವಾರ್ತೆ, ಸಾಗರ ಸಂದೇಶ ದಿನಪತ್ರಿಕೆಯಲ್ಲಿ ಮತ್ತು ದಿ:26–02–2015 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ಈ ಪ್ರಕಟಣೆ ದಿನಪತ್ರಿಕೆಯಲ್ಲಿ ಮತ್ತು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ಈ ವಾಹನ ಬಿಡಿಸಿಕೊಳ್ಳುವ ಬಗ್ಗೆ ಹಕ್ಕು ಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:–31–10–2015ರಂದು ವಾದ ಮಂಡಿಸಿ, ಸಾಗುವಾನಿ ನಾಟಾಗಳನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ ಬಗ್ಗೆ ಶಿರಾಳಕೊಪ್ಪ ವಲಯದ ನಗರ ತನಿಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ನಂತರ ವಿಚಾರಣಾಧಿಕಾರಿ ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ದಾಖಲೆಗಳಿಂದ ಅರಣ್ಯ ಉತ್ಪನ್ನವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದರಿಂದ. ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮೋಹನ್ ಎನ್ ಗಂಗೋಳಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ, ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ ಇವರು ಅ.ಮೊ.ಸಂಖ್ಯೆ: 26/14–15ರಲ್ಲಿ ವಶಪಡಿಸಿಕೊಂಡ ವಾಹನ ಮಾರುತಿ ಸುಜುಕಿ 800 ಕಾರ್ ನಂಬರ್ ಕೆಎ–25–ಎಂ–9236 (ಛಾಸಿಸ್ ನಂ: SB-308-IN1700029 ಇಂಜಿನ್ ನಂ: F8BIN2368158) ಮತ್ತು

ಸಾಗುವಾನಿ ನಾಟಾ 06=0.310ಎಂ3 ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 19–12–2015 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**P.R. 55**

**SC-25**

**ಮೋಹನ್ ಎನ್ ಗಂಗೋಳಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ.

**ಬಿ3:ಅಮೊ:ವಾಹನ:ವಿವ:27/13–14, ದಿನಾಂಕ : 19 : 12 : 2015**

| | | |
|---|---|---|
| **ಉಪಸ್ಥಿತರು** | :: | ಮೋಹನ್ ಎನ್ ಗಂಗೋಳಿ, ಕ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ,<br>ಶಿಕಾರಿಪುರ ವಲಯ, ಶಿಕಾರಿಪುರ.<br>(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ). |
| **ಆರೋಪಿಗಳು** | :: | ಪತ್ತೆಯಾಗಿರುವುದಿಲ್ಲ. |
| **ಭಾಧ್ಯತೆದಾರರು** | :: | ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ :–**

ದಿ:01–12–2013 ರಂದು ಬಿಳಿ ಭಾಗದ ಮಾರುತಿ ಒಮಿನಿ ಕೆಎ–14–ಎಂ–997 ರಲ್ಲಿ ಬೀಟೆ ನಾಟಾವನ್ನು ಅಕ್ರಮವಾಗಿ ಸಾಗಿಸುತ್ತಿರುವಾಗ ಶಿಕಾರಿಪುರ ವಲಯದ ನಗರ ತನಿಖೆ ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:01–12–2013 ರಂದು ಶಿಕಾರಿಪುರ ವಲಯದ ನಗರ ತನಿಖೆ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಬೆಳಗಿನ ಜಾವ ಶಿಕಾರಿಪುರದಿಂದ ಆನಂದಪುರಂಗೆ ಹೋಗುವ ಮುಖ್ಯ ರಸ್ತೆಯಲ್ಲಿ ಇಲಾಖಾ ಜೀಪಿನಲ್ಲಿ ಗಸ್ತು ಮಾಡುತ್ತಾ ಬರುತ್ತಿರುವಾಗ, ಗಾಮ ಕಡೆಯಿಂದ ಶಿಕಾರಿಪುರ ಕಡೆಗೆ ಒಂದು ಬಿಳಿಬಣ್ಣದ ಮಾರುತಿ ಒಮಿನಿ ಬೆಳಿಗ್ಗೆ ಸುಮಾರು 7.00 ಗಂಟೆ ಸಮಯಕ್ಕೆ ಬರುತ್ತಿದ್ದು, ಅದರಲ್ಲಿದ್ದ ಆಸಾಮಿಗಳು ಇಲಾಖಾ ಜೀಪನ್ನು ನೋಡಿ ಸ್ವಲ್ಪ ದೂರದಲ್ಲಿ ವಾಹನ ನಿಲ್ಲಿಸಿ, ವಾಹನದಲ್ಲಿದ್ದ ಆಸಾಮಿಗಳು ವಾಹನದಿಂದ ಇಳಿದು ಕೈಗೆ ಸಿಗದೆ ಪರಾರಿಯಾದರು. ನಂತರ ವಾಹನ ಪರಿಶೀಲಿಸಿದಾಗ ಮಾರುತಿ ಒಮಿನಿ ಕೆಎ–14–ಎಂ–997 (ಛಾಸ್ಸಿಸ್ ನಂ: 898408 ಇದ್ದು, ಇಂಜಿನ್ ನಂ. ಕಂಡು ಬಂದಿರುವುದಿಲ್ಲ) ಈ ವಾಹನದೊಳಗೆ 24 ಬೀಟೆ ರೋಲರ್ಸ್‌ಗಳು ಮತ್ತು ಬೀಟೆ ಸೈಜ್ 27 ಇದ್ದು, ಈ ಸೈಜ್‌ಗಳ ಮೇಲೆ ಯಾವುದೇ ಇಲಾಖಾ ಛಾಪಾದ ಗುರುತಿರಲಿಲ್ಲ. ಅಲ್ಲದೇ ಸಾಗಿಸಲು ರಹದಾರಿ ಇರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಸದರಿ ಸೈಜ್‌ಗಳಿಗೆ ನಂಬರ್ ಕೊಟ್ಟು, ಅಳತೆಮಾಡಲಾಗಿ, 51=0.175ಎಂ3 ಪ್ರಮಾಣವಿರುತ್ತದೆ. ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿಯೊಂದಿಗೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಜಪ್ತು ಮಾಡಿಕೊಂಡು ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 50,, 62, 80, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು, 1969ರ ಉಪನಿಯಮ 144, 165 ರ ಪ್ರಕಾರ ಶಿಕಾರಿಪುರ ವಲಯದ ಅ.ಮೊ. ಸಂಖ್ಯೆ:35/13–14ನ್ನು ಶಿಕಾರಿಪುರ ನಗರ ತನಿಖೆ ಉಪ ವಲಯ ಅರಣ್ಯಾಧಿಕಾರಿ, ದಾಖಲಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ದಾಖಲೆಗಳೊಂದಿಗೆ, ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ ಇವರು ವಾಹನವನ್ನು ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನಗಳನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ "ಬಿ" ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ:ವಿವ–27/13–14, ದಿ:10–12–2013 ರಂದು ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರಿಗೆ ಪತ್ರ ಬರೆದು ಕೋರಲಾಗಿದೆ. ಆದರಂತೆ, ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರು ಪತ್ರ ಸಂಖ್ಯೆ:ಪ್ರಾಸಾಅ–ಶಿ–ಕೆಎ–14–ಎಂ–997/2013–14, ದಿ:18–12–2013ರ ಪತ್ರದಲ್ಲಿ ಈ ವಾಹನದ "ಬಿ" ಎಕ್ಸಟ್ರ್ಯಾಕ್ಟ್‌ನ್ನು ಲಗತ್ತಿಸಿ ದಿ:23–12–2013 ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ವಾಹನದ ಸಿ.ಸಿ.ಯನ್ನು ಸಾರಿಗೆ ಅಧಿಕಾರಿ, ಸಾಗರಕ್ಕೆ ದಿ:28–02–2000ರಂದು ವರ್ಗಾಯಿಸಿದ ಬಗ್ಗೆ "ಬಿ"ಎಕ್ಸಟ್ರ್ಯಾಕ್ಟ್‌ನಲ್ಲಿ ನಮೂದಿಸಿರುತ್ತಾರೆ. ಅದರಂತೆ ಸಾರಿಗೆ ಅಧಿಕಾರಿ, ಸಾಗರಕ್ಕೆ ಬಿ3:ಅಮೊ:ವಾಹನ:ವಿವ–27/13–14, ದಿ:09–1–2014 ಮತ್ತು ದಿ:06–01–2015 ರಂದು ಪತ್ರ ಬರೆದು ವಾಹನದ "ಬಿ" ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಕೋರಿದೆ. ಆದರೆ ಸಾರಿಗೆ ಅಧಿಕಾರಿ, ಸಾಗರ ಇವರು ಇಲ್ಲಿಯವರೆವಿಗೆ ಈ ವಾಹನದ "ಬಿ" ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಇದರಿಂದ ಈ ವಾಹನದ ಅರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ, 1963 ಸೆಕ್ಷನ್ 71(ಬಿ)(1) ರ ಪ್ರಕಾರ ನೋಟಿಸ್‌ನ್ನು ನೀಡಲು ಈ ನ್ಯಾಯಾಲಯಕ್ಕೆ ಸಾಧ್ಯವಾಗಿರುವುದಿಲ್ಲ. ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ನಂತರ ಬಹಿರಂಗ ಹರಾಜಿನಲ್ಲಿ ಹರಾಜು ಮಾಡಿದ ಮೇಲೆ ಅರ್.ಸಿ. ಮಾಲೀಕರು ಈ ಬಗ್ಗೆ ನ್ಯಾಯಾಲಯಕ್ಕೆ ಮೊರೆ ಹೋದರೆ ಅದಕ್ಕೆ ಸಾರಿಗೆ ಅಧಿಕಾರಿ, ಸಾಗರ ಇವರೇ ನೇರ ಹೊಣೆಗಾರರಾಗಿರುತ್ತಾರೆ.

ಈ ನಡುವೆ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ:ಸಿಆರ್–16/14–15, ದಿ:28–05–2014ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು.

ಅದರಂತೆ ದಿ:10–06–2014 ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:19–06–2014 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ಈ ಪ್ರಕಟಣೆ ದಿನಪತ್ರಿಕೆಯಲ್ಲಿ ಮತ್ತು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ಈ ವಾಹನ ಬಿಡಿಸಿಕೊಳ್ಳುವ ಬಗ್ಗೆ ಹಕ್ಕು ಬಾಧ್ಯತೆಗೆಯ ಅರ್ಜಿ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:–31–10–2015ರಂದು ಈ ಮುಂದಿನಂತೆ ವಾದ ಮಂಡಿಸಿ, ಬೀಟೆ ಸೈಜ್‌ಗಳನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ ಬಗ್ಗೆ ಶಿಕಾರಿಪುರ ವಲಯದ ನಗರ ತನಿಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ನಂತರ ವಿಚಾರಣಾಧಿಕಾರಿ ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ದಾಖಲೆಗಳಿಂದ ಅರಣ್ಯ ಉತ್ಪನ್ನವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದರಿಂದ. ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮೋಹನ್ ಎನ್ ಗಂಗೋಳಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ, ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ ಇವರು ಅ.ಮೊ.ಸಂಖ್ಯೆ: 35/13–14 ರಲ್ಲಿ ಜಪ್ತು ಮಾಡಿದ ಬಿಳಿ ಬಣ್ಣದ ಮಾರುತಿ ಒಮಿನಿ ಕೆಎ–14–ಎಂ–997 (ಛಾಸ್ಸಿಸ್ ನಂ: 898408 ಇದ್ದು, ಇಂಜಿನ್ ನಂ. ಕಂಡು ಬಂದಿರುವುದಿಲ್ಲ)ವನ್ನು ಮತ್ತು ಈ ವಾಹನದಲ್ಲಿದ್ದ ಬೀಟೆ ಸೈಜ್ 51=0.175ಎಂ3ಯನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 19–12–2015ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**P.R. 56**

**SC-25**

**ಮೋಹನ್ ಎನ್ ಗಂಗೋಳಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:25/13–14, ದಿನಾಂಕ : 19 : 12 : 2015.**

| | | |
|---|---|---|
| **ಉಪಸ್ಥಿತರು** | :: | ಮೋಹನ್ ಎನ್ ಗಂಗೋಳಿ, ಕ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಸಾಗರ ವಿಭಾಗ, ಸಾಗರ. |
| **ಫಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ,<br>ಅಂಬ್ಲಿಗೊಳ ವಲಯ, ಅಂಬ್ಲಿಗೊಳ.<br>(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು** | :: | 1) ಅಬ್ದುಲ್ ಕರೀಂ ಬಿನ್ ಅಬ್ದುಲ್ ಖಾದರ್,<br>38 ವರ್ಷ, ಸೊಸೈಟಿ ಕೇರಿ,<br>ಶಿಕಾರಿಪುರ ಟೌನ್. |
| **ಭಾದ್ಯತೆದಾರರು** | :: | ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ :–**

ದಿ:10–11–2013 ರಂದು ಮಾರುತಿ ಓಮಿನಿ ಕೆಎ–27–ಎಂ–2567 ರಲ್ಲಿ ಬೀಟೆ ಸಾಗುವಾನಿ ಸೈಜ್‌ಗಳನ್ನು ಅಕ್ರಮವಾಗಿ ಸಾಗಿಸುತ್ತಿರುವಾಗ ಚುರ್ಚಿಗುಂಡಿ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:10–11–2013 ರಂದು ಅಂಬ್ಲಿಗೊಳ ವಲಯ ಚುರ್ಚಿಗುಂಡಿ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಇಲಾಖಾ ವಾಹನ ಕೆಎ–15–ಜಿ–321ರಲ್ಲಿ ಶಿಕಾರಿಪುರ ತಾಲ್ಲೂಕ್, ಅಂಜನಾಪುರ ಹೋಬಳಿಯ, ಚಿಕ್ಕಜೋಗಿ ಹಳ್ಳಿಯಿಂದ–ದೊಡ್ಡಜೋಗಿ ಹಳ್ಳಿಗೆ ಹೋಗುವ ಡಾಂಬರ್ ರಸ್ತೆಯಲ್ಲಿ ಬೆಳಗಿನ ಜಾವ ಗಸ್ತು ಮಾಡುತ್ತಿರುವಾಗ ಚಿಕ್ಕಜೋಗಿ ಹಳ್ಳಿಯಿಂದ ಒಂದು ವಾಹನ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ, 25 ಮೀಟರ್ ಹಿಂದೆಯೇ ವಾಹನ ನಿಲ್ಲಿಸಿ, ಆಸಾಮಿಗಳು ಪಕ್ಕದ ಗದ್ದೆಯ ಕಡೆಗೆ ಓಡಲು ಪ್ರಾರಂಬಿಸಿದರು ಕೂಡಲೇ ಅವರನ್ನು ಬೆನಟ್ಟಿದರು ಕೈಗೆ ಸಿಗದೆ ಪರಾರಿಯಾಗಿರುತ್ತಾರೆ. ಓಡಿ ಹೋದ ಆಸಾಮಿಯನ್ನು ಬ್ಯಾಟರಿ ಬೆಳಕಿನ ಸಹಾಯದಿಂದ ಗುರುತಿಸಿರುತ್ತಾರೆ. ಅವನ ಹೆಸರು ಅಬ್ದುಲ್ ಕರೀಂ ಬಿನ್ ಅಬ್ದುಲ್ ಖಾದರ್, 38 ವರ್ಷ, ಸೊಸೈಟಿ ಕೇರಿ, ಶಿಕಾರಿಪುರ ಟೌನ್ ಆಗಿರುತ್ತದೆ. ನಂತರ ಆಸಾಮಿ ನಿಲ್ಲಿಸಿದ ವಾಹವನ್ನು ಬ್ಯಾಟರಿ ಮತ್ತು ಇಲಾಖಾ ಜೀಪಿನ ಬೆಳಕಿನ ಸಹಾಯದಿಂದ ತಪಾಸಣೆ ಮಾಡಲಾಗಿ ಮಾರುತಿ ಒಮಿನಿಯಾಗಿದ್ದು, ನಂ:ಕೆಎ–27–ಎಂ–2567,

(ಛಾಸ್ಸಿಸ್ ನಂ: XMA3EVB11S00887745XK7 ಮತ್ತು ಇಂಜಿನ್ ನಂಬರ್ ಕಂಡು ಬಂದಿಲ್ಲ) ಆಗಿದ್ದು, ಈ ವಾಹನದ ಒಳಗಡೆ ಮರದ ಸೈಜ್‌ಗಳಿರುವುದು ಕಂಡು ಬಂದಿದ್ದು, ಈ ಸೈಜ್‌ಗಳನ್ನು ನಾಡಾ ಗರಗಸದಿಂದ ಕೊಯ್ತು ಮಾಡಿದ್ದಾಗಿರುತ್ತದೆ. ಬೀಟೆ ಮತ್ತು ಸಾಗುವಾನಿ ಜಾತಿಯದಾಗಿರುತ್ತದೆ. ಈ ಸೈಜ್‌ಗಳ ಮೇಲೆ ಇಲಾಖಾ ಛಾಪಾ ಗುರುತು ಕಂಡು ಬಂದಿರುವುದಿಲ್ಲ. ಅದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಸೈಜ್‌ಗಳಿಗೆ ಸಂಖ್ಯೆ ಕೊಟ್ಟು ಅಳತೆ ಮಾಡಲಾಗಿ ಬೀಟೆ 52=0.160ಎಂ3, ಸಾಗುವಾನಿ 07=0.176ಎಂ3 ಒಟ್ಟು 59=0.336ಎಂ3 ಆಗಿರುತ್ತದೆ. ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 50, 62, 71(ಎ), 104(ಎ) R/W-IPC 379 ರಡಿ ಮತ್ತು ಕರ್ನಾಟಕ ಅರಣ್ಯ ಕಾನೂನು, 1969ರ ಉಪನಿಯಮ 144, 165ರ ಪ್ರಕಾರ ಅಂಬ್ಲಿಗೊಳ ವಲಯದ ಅ.ಮೊ. ಸಂಖ್ಯೆ 24/13–14ನ್ನು ಚುರ್ಚಿಗುಂಡಿ ಶಾಖೆ, ಉಪ ವಲಯ ಅರಣ್ಯಾಧಿಕಾರಿ, ದಾಖಲಿಸಿರುತ್ತಾರೆ. ನಂತರ ಉಪ ವಲಯ ಅರಣ್ಯಾಧಿಕಾರಿಯು ವಾಹನ ಮತ್ತು ಅರಣ್ಯ ಉತ್ಪನ್ನವನ್ನು ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ವಾಹನವನ್ನು ಮತ್ತು ಅರಣ್ಯ ಉತ್ಪನ್ನವನ್ನು ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ ಬಿ ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ:ವಿವ–25/13–14, ರಲ್ಲಿ ದಿ:29–11–2013, 07–02–2014 ರಂದು ಸಾರಿಗೆ ಅಧಿಕಾರಿ, ಹಾವೇರಿ ಇವರಿಗೆ ಪತ್ರ ಬರೆದು ಕೋರಲಾಗಿದೆ. ಆದರೆ ಸಾರಿಗೆ ಆಧಿಕಾರಿ, ಹಾವೇರಿ ಇವರು ಇಲ್ಲಿಯವರೆಗೆ ಈ ವಾಹನದ ಬಿ ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಅದ್ದರಿಂದ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ನಂತರ ಈ–ಸೇಲ್‌ನಲ್ಲಿ ಬಹಿರಂಗ ಹರಾಜು ಮಾಡಿದ ಬಗ್ಗೆ ಆರ್. ಸಿ. ಮಾಲೀಕರು ನ್ಯಾಯಾಲಯಕ್ಕೆ ದೂರು ಸಲ್ಲಿಸಿದರೇ ಅದಕ್ಕೆ ಸಾರಿಗೆ ಅಧಿಕಾರಿ, ಹಾವೇರಿ ಮತ್ತು ಈ ಪ್ರಕರಣದ ತನಿಖಾಧಿಕಾರಿಯೇ, ನೇರ ಹೊಣೆಗಾರರಾಗಿರುತ್ತಾರೆ.

ಈ ನಡುವೆ ಈ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ:ಸಿಆರ್–27/13–14, ದಿ:04–12–2013ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಣೆ ಪ್ರಕಟಿಸಲು ಕೊರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ:16:01:2014 ರಂದು ರಾಜ್ಯ ಪತ್ರದಲ್ಲಿ ಪ್ರಕಟಗೊಂಡರೂ ವಾಹನದ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ವಾಹನ ಬಿಡಿಸಿಕೊಳ್ಳುವ ಬಗ್ಗೆ ಹಕ್ಕುಭಾದ್ಯತೆ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:–31–10–2015 ರಂದು ವಾದ ಮಂಡಿಸಿ, ಬೀಟೆ, ಸಾಗುವಾನಿ ಸೈಜ್‌ನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ ಬಗ್ಗೆ ಚುರ್ಚಿಗುಂಡಿ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ನಂತರ ತನಿಖಾಧಿಕಾರಿ ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ದಾಖಲೆಗಳಿಂದ ಅರಣ್ಯ ಉತ್ಪನ್ನವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದರಿಂದ. ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮೋಹನ್ ಎನ್ ಗಂಗೋಳಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ, ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ಅರಣ್ಯ ಮೊಕದ್ದಮೆಯಲ್ಲಿ (ಅ.ಮೊ.ಸಂಖ್ಯೆ:24/13–14, ದಿ:10:11:2013) ಜಪ್ತು ಮಾಡಿದ ವಾಹನ ಮಾರುತಿ ಓಮಿನಿ ನಂ: ಕೆಎ–27–ಎಂ–2567,(ಛಾಸ್ಸಿಸ್ ನಂ:XMA3EVB11S00887745XK7 ಮತ್ತು ಇಂಜಿನ್ ನಂಬರ್ ಕಂಡು ಬಂದಿಲ್ಲ) ರಲ್ಲಿ ಬೀಟೆ 52=0.160ಎಂ3, ಸಾಗುವಾನಿ 07=0.176ಎಂ3 ಒಟ್ಟು 59=0.336ಎಂ3 ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 19–12–2015 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**P.R. 57**

**SC-25**

**ಮೋಹನ್ ಎನ್ ಗಂಗೋಳಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:01/14–15, ದಿನಾಂಕ : 19 : 12 : 2015.**

**ಉಪಸ್ಥಿತರು** :: ಮೋಹನ್ ಎನ್ ಗಂಗೋಳಿ, ಕ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

| | | |
|---|---|---|
| **ಪಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ,<br>ಅಂಬ್ಲಿಗೊಳ ವಲಯ, ಅಂಬ್ಲಿಗೊಳ. (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು** | :: | ಪತ್ತೆಯಾಗಿರುವುದಿಲ್ಲ. |
| **ಭಾದ್ಯತೆದಾರರು** | :: | ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ :–**

ದಿ:05–05–2014 ರಂದು ಟಿ.ವಿ.ಎಸ್. ವಿಕ್ಟರ್ ಬೈಕ್ ಕೆಎ–17–ಆರ್–4711 ರಲ್ಲಿ ಬೀಟೆ, ನಾಟಾವನ್ನು ಅಕ್ರಮವಾಗಿ ಸಾಗಿಸುತ್ತಿರುವಾಗ ಅಂಬ್ಲಿಗೊಳ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:05–05–2014 ರಂದು ಅಂಬ್ಲಿಗೊಳ ವಲಯದ ಅಂಬ್ಲಿಗೊಳ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಸಾಗರ ತಾಲ್ಲೂಕು, ಅನಂದಪುರ ಹೋಬಳಿ, ತ್ಯಾಗರ್ತಿಯಿಂದ ದೊಡ್ಡಬ್ಯಾಣಕ್ಕೆ ಹೋಗುವ ರಸ್ತೆಯಲ್ಲಿ ರಾತ್ರಿ ಗಸ್ತು ತಿರುಗುತ್ತಿರುವಾಗ ಒಂದು ದ್ವಿಚಕ್ರ ವಾಹನದಲ್ಲಿ ಇಬ್ಬರು ಆಸಾಮಿಗಳು ಬೀಟೆ ನಾಟಾ ಸಾಗಿಸುತ್ತಿರುವಾಗ, ಇಲಾಖೆಯವರನ್ನು ನೋಡಿ ಆಸಾಮಿಗಳು ವಾಹನ ಅಲ್ಲೇ ಬಿಟ್ಟು ಓಡಲು ಪ್ರಾರಂಭಿಸಿದಾಗ ಅವರನ್ನು ಇಲಾಖೆಯವರು ಬೆನ್ನಟ್ಟಿದರು ಕೈಗೆ ಸಿಗದೆ ಓಡಿ ಪರಾರಿಯದರು. ವಾಹನ ಟಿ.ವಿ.ಎಸ್. ವಿಕ್ಟರ್ ಬೈಕ್, ಕೆಎ–17–ಅರ್–4711, (ಛಾಸ್ಸಿಸ್ ನಂ: N-3301F343244, ಮತ್ತು ಇಂಜಿನ್ ನಂ: N-3301M345258) ಆಗಿದ್ದು, ಈ ಬೀಟೆ ನಾಟಾಕ್ಕೆ ಇಲಾಖಾ ಛಾಪಾ ಗುರುತು ಕಂಡು ಬಂದಿರುವುದಿಲ್ಲ ಹಾಗೂ ಸಾಗಿಸಲು ರಹದಾರಿ ಇರಲಿಲ್ಲ. ಆದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಬೀಟೆ ನಾಟಾ ಅಳತೆ ಮಾಡಲಾಗಿ 0.106ಎಂ3 ಪ್ರಮಾಣವಿದ್ದು, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು, ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು, 1969ರ ಉಪನಿಯಮ 144, 165ರ ಪ್ರಕಾರ ಅಂಬ್ಲಿಗೊಳ ವಲಯದ ಅ.ಮೊ. ಸಂಖ್ಯೆ 08/14–15ನ್ನು ಅಂಬ್ಲಿಗೊಳ ಶಾಖೆಯ, ಉಪ ವಲಯ ಅರಣ್ಯಾಧಿಕಾರಿ, ದಾಖಲಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ದಾಖಲೆಗಳೊಂದಿಗೆ, ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ವಾಹನವನ್ನು ಮತ್ತು ಅರಣ್ಯ ಉತ್ಪನ್ನವನ್ನು ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ ಬಿ ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ:ವಿವ–01/14–15, ದಿ:14–05–2014 ಮತ್ತು ದಿ:06–01–2015 ರಂದು ಸಾರಿಗೆ ಅಧಿಕಾರಿ, ದಾವಣಗೆರೆ ಇವರಿಗೆ ಪತ್ರ ಬರೆದು ಕೋರಲಾಗಿದೆ. ಆದರೆ ಸಾರಿಗೆ ಆಧಿಕಾರಿ, ದಾವಣಗೆರೆ ಇವರು ಇಲ್ಲಿಯವರೆಗೆ ಈ ವಾಹನದ ಬಿ ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಇದರಿಂದ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ, 1963 ಸೆಕ್ಷನ್ 71(ಬಿ)(1) ರ ಪ್ರಕಾರ ನೋಟೀಸ್ ಜಾರಿ ಮಾಡಲು ಈ ನ್ಯಾಯಾಲಯಕ್ಕೆ ಸಾಧ್ಯವಾಗಿರುವುದಿಲ್ಲ. ಈ ವಾಹನ ಮತ್ತು ಅರಣ್ಯ ಉತ್ಪನ್ನ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಂತರ ಈ–ಸೇಲ್‌ನಲ್ಲಿ ವಿಲೇ ಮಾಡಿದ ನಂತರ ವಾಹನ ಮಾಲೀಕರು ನ್ಯಾಯಾಲಯಕ್ಕೆ ದೂರು ಸಲ್ಲಿಸಿದಲ್ಲಿ ಸಾರಿಗೆ ಅಧಿಕಾರಿ, ದಾವಣಗೆರೆ ಇವರೇ ನೇರ ಹೊಣೆಗಾರರಾಗಿರುತ್ತಾರೆ.

ಈ ನಡುವೆ ಈ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ:ಸಿಆರ್–16/14–15, ದಿ:28–05–2014ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ ದಿ:10–06–2014 ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:19–06–2014 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ಈ ಪ್ರಕಟಣೆ ದಿನಪತ್ರಿಕೆಯಲ್ಲಿ ಮತ್ತು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ಈ ವಾಹನ ಬಿಡಿಸಿಕೊಳ್ಳುವ ಬಗ್ಗೆ ವಾಹನ ಮಾಲೀಕರಾಗಲೀ, ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:–31–10–2015ರಂದು ಈ ಮುಂದಿನಂತೆ ವಾದ ಮಂಡಿಸಿ, ಬೀಟೆ ನಾಟಾವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ ಬಗ್ಗೆ ಅಂಬ್ಲಿಗೊಳ ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ನಂತರ ತನಿಖಾಧಿಕಾರಿ ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ದಾಖಲೆಗಳಿಂದ ಅರಣ್ಯ ಉತ್ಪನ್ನವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮೋಹನ್ ಎನ್ ಗಂಗೋಳಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ, ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ಅರಣ್ಯ ಮೊಕದ್ದಮೆ ಸಂಖ್ಯೆ 08/14–15 ರಲ್ಲಿ ಜಪ್ತು ಮಾಡಿದ ವಾಹನ ಟಿ.ವಿ.ಎಸ್. ವಿಕ್ಟರ್ ಬೈಕ್, ಕೆಎ–17–ಆರ್–4711, (ಛಾಸ್ಸಿಸ್ ನಂ: N-3301F343244, ಇಂಜಿನ್ ನಂ: N-3301M345258) ಮತ್ತು ಈ ವಾಹನದಲ್ಲಿದ್ದ 01 ಬೀಟೆ ನಾಟಾ 0.106ಎಂ3, ಯನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ

ಮುದ್ರಿಸಿ, ನಂತರ ಸರಿಪಡಿಸಿ ದಿ: 19–12–2015ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

P.R. 58
SC-25

**ಮೋಹನ್ ಎನ್ ಗಂಗೋಳಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:35/13–14, ದಿನಾಂಕ : 19–12–2015.**

| | | |
|---|---|---|
| **ಉಪಸ್ಥಿತರು** | :: | ಮೋಹನ್ ಎನ್ ಗಂಗೋಳಿ, ಕ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ,<br>ಅಂಬ್ಲಿಗೊಳ ವಲಯ, ಅಂಬ್ಲಿಗೊಳ.<br>(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು** | :: | ಪತ್ತೆಯಾಗಿರುವುದಿಲ್ಲ. |
| **ಭಾದ್ಯತೆದಾರರು** | :: | ಯಾರೂ ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ :–**

ದಿ:31–03–2014 ರಂದು ಸ್ಪ್ಲೆಂಡರ್ ಬೈಕ್ ಕೆಎ–17–ಎಲ್–3920 ಮತ್ತು ಟಿ.ವಿ.ಎಸ್. ವಿಕ್ಟರ್ ಬೈಕ್ ಕೆಎ–14–ಟಿಆರ್–2814ರಲ್ಲಿ ಬೀಟೆ ನಾಟಾವನ್ನು ಅಕ್ರಮವಾಗಿ ಸಾಗಿಸುತ್ತಿರುವಾಗ ಸಾಲೂರು ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:31–03–2014 ರಂದು ಅಂಬ್ಲಿಗೊಳ ವಲಯ ಸಾಲೂರು ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ತಾ: ಅಂಜನಾಪುರ ಹೋಬಳಿಯ ಸಾಲೂರಿನಿಂದ ಶಿಕಾರಿಪುರಕ್ಕೆ ಹೋಗುವ ರಸ್ತೆಯಲ್ಲಿ ಶಿಕಾರಪುರ ಕಡೆಗೆ 2 ಬೈಕ್ ಬೆಳಗಿನ ಜಾವ 6.00 ಗಂಟೆ ಸಮಯದಲ್ಲಿ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ, 50 ಮೀಟರ್ ದೂರದಲ್ಲಿ ಬೈಕ್‌ನ್ನು ಆಸಾಮಿಗಳು ಕೆಳಗೆ ಬಿಳಿಸಿ, ಇಳಿದು ಓಡಲು ಪ್ರಾರಂಭಿಸಿದರು, ಅವರನ್ನು ಬೆನ್ನಟ್ಟಿದರು. ಆಸಾಮಿಗಳು ಕೆ.ಎಫ್.ಡಿ.ಸಿ. ನೆಡುತೋಪಿನಲ್ಲಿ ಓಡಿ ಕೈಗೆ ಸಿಗದೆ ಪರಾರಿಯಾದರು. ನಂತರ ಬೈಕ್ ಪರಿಶೀಲಿಸಲಾಗಿ (1) ಹಿರೋ ಹೊಂಡಾ ಸ್ಪ್ಲೆಂಡರ್ ಬೈಕ್ ಕೆಎ–17–ಎಲ್–3920 (ಛಾಸ್ಸಿಸ್ ನಂ: 00E20F15260 ಮತ್ತು ಇಂಜಿನ್ ನಂ. ಕಂಡು ಬಂದಿರುವುದಿಲ್ಲ) (2) ಟಿ.ವಿ.ಎಸ್. ವಿಕ್ಟರ್ ಬೈಕ್ ಕೆಎ–14–ಟಿಆರ್–2814 (ಛಾಸ್ಸಿಸ್ ನಂ: MD625AF1541F63413 ಮತ್ತು ಇಂಜಿನ್ ನಂ: OF1F41217570) ಆಗಿದ್ದು, ಎರಡು ಬೈಕ್‌ಗಳ ಮೇಲೆ ಬೀಟೆ ತುಂಡಿದ್ದು, ಈ ತುಂಡುಗಳಿಗೆ ಇಲಾಖಾ ಛಾಪಾ ಗುರುತು ಕಂಡು ಬಂದಿರುವುದಿಲ್ಲ. ಇದನ್ನು ಸಾಗಿಸಲು ರಹದಾರಿ ಇರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಈ 2 ಬೀಟೆ ತುಂಡುಗಳಿಗೆ ನಂಬರ್ ಕೊಟ್ಟು, ಅಳತೆ ಮಾಡಿಲಾಗಿ 2=0.192ಎಂ3 ಪ್ರಮಾಣವಿರುತ್ತದೆ. ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ, 1963 ಸೆಕ್ಷನ್ 50, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165 ಮತ್ತು ಐ.ಪಿ.ಸಿ ಸೆಕ್ಷನ್–379 ರ ಪ್ರಕಾರ ಅಂಬ್ಲಿಗೊಳ ವಲಯದ ಅ.ಮೊ. ಸಂಖ್ಯೆ 50/13–14ನ್ನು ಸಾಲೂರು ಶಾಖೆಯ, ಉಪ ವಲಯ ಅರಣ್ಯಾಧಿಕಾರಿ, ದಾಖಲಿಸಿ, ವಾಹನಗಳು ಮತ್ತು ಅರಣ್ಯ ಉತ್ಪನ್ನವನ್ನು ದಾಖಲೆಗಳೊಂದಿಗೆ, ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ವಾಹನಗಳನ್ನು ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನಗಳನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ 2 ವಾಹನಗಳ "ಬಿ" ಎಕ್ಸ್‌ಟ್ರ್ಯಾಕ್ಟ್ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ:ವಿವ–35/13–14, ದಿ:21–04–2014 ರಂದು ಸಾರಿಗೆ ಅಧಿಕಾರಿ, ದಾವಣಗೆರೆ ಮತ್ತು ಶಿವಮೊಗ್ಗ ಇವರಿಗೆ ಪತ್ರ ಬರೆದು ಕೋರಲಾಗಿದೆ. ಆದರಂತೆ, ಈ 2 ವಾಹನಗಳ "ಬಿ" ಎಕ್ಸ್‌ಟ್ರ್ಯಾಕ್ಟ್‌ನ್ನು ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ಸಂಬಂಧಪಟ್ಟ ಸಾರಿಗೆ ಅಧಿಕಾರಿಗಳಿಂದ ಪಡೆದು ಪತ್ರ ಸಂಖ್ಯೆ:37/14–15, ದಿ:28–04–2014 ರಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಹಿರೋ ಹೊಂಡಾ ಸ್ಪ್ಲೆಂಡರ್ ಬೈಕ್ ಕೆಎ–17–ಎಲ್–3920 ರ "ಬಿ"ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ಶ್ರೀ ವಿಜೇಂದ್ರ ಡಿ.ಎಂ. ಬಿನ್ ಎಲಿಕೋಟೆ ರಾವ್ ಡಿ.ಎಂ. ಮೆ: ಮಹೇಂದ್ರ ಗ್ರಾರ್ಮೆಂಟ್ಸ್, ನ್ಯಾಮತಿ ಹೊನ್ನಾಳಿ (ತಾ), ದಾವಣಗೆರೆ (ಜಿ)ಎಂದು ನಮೂದಿಸಲಾಗಿತ್ತು. ಮತ್ತು ಟಿ.ವಿ.ಎಸ್. ವಿಕ್ಟರ್ ಬೈಕ್ ಕೆಎ–14–ಟಿಅರ್–2814ರ(ಕೆಎ–14–ಎಸ್–1036) "ಬಿ" ಎಕ್ಸ್‌ಟ್ರ್ಯಾಕ್ಟ್ ನಲ್ಲಿ ಶ್ರೀ ಶೇಖರ ಕೆ. ಬಿನ್ ಕಣ್ಣನ್ ಅರ್. #8/21, ಶಾಂತಿ ನಿಲಯ, 3ನೇ ಕ್ರಾಸ್, ಗೋಪಾಲಗೌಡ ಎಕ್ಸ್‌ಟೆನ್‌ಷನ್, ಶಿವಮೊಗ್ಗ ಎಂದು ಅರ್.ಸಿ. ಮಾಲೀಕರ ಹೆಸರು ಮತ್ತು ವಿಳಾಸ ನಮೂದಾಗಿರುತ್ತದೆ. ಅದರಂತೆ, ಈ 2 ವಾಹನಗಳ ಅರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ, 1963 ಸೆಕ್ಷನ್ 71(ಬಿ)(1) ರ ಪ್ರಕಾರ ನೋಟಿಸ್‌ನ್ನು, ನೋಂದಣಿ ಅಂಚೆ ಮೂಲಕ, 30 ದಿನಗಳ ಕಾಲಾವಕಾಶ ನೀಡಿ, ದಿ:28–05–2014 ರಂದು ಜಾರಿ ಮಾಡಲಾಗಿದೆ. ಶ್ರೀ ವಿಜೇಂದ್ರ ಡಿ.ಎಂ. ಇವರು ನೋಟಿಸನ್ನು ಪಡೆದ ಬಗ್ಗೆ ಸ್ವೀಕೃತಿಯನ್ನು ಮತ್ತು ಶ್ರೀ ಶೇಖರ ಕೆ. ಇವರಿಗೆ ಜಾರಿ ಮಾಡಿದ ಲಕೋಟೆ ಮೇಲೆ "ನಾಟ್ ನೌನ್" ಎಂದು ಅಂಚೆ ಇಲಾಖೆಯವರು ನಮೂದಿಸಿ ಈ ನ್ಯಾಯಾಲಯಕ್ಕೆ ಹಿಂದಿರುಗಿಸಿರುತ್ತಾರೆ.

ಈ ನಡುವೆ 2 ವಾಹನಗಳ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ಪ್ರಕಟಣೆ:ಸಿಆರ್–16/14–15, ದಿ:28–05–2014ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು

ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ ದಿ:10–06–2014 ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:19–06–2014 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ಈ ಪ್ರಕಟಣೆ ದಿನಪತ್ರಿಕೆಯಲ್ಲಿ ಮತ್ತು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ಈ ವಾಹನ ಬಿಡಿಸಿಕೊಳ್ಳುವ ಬಗ್ಗೆ, ವಾಹನ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:–31–10–2015 ರಂದು ವಾದ ಮಂಡಿಸಿ, ಬೀಟೆ ನಾಟಾವನ್ನು ಈ ವಾಹನಗಳಲ್ಲಿ ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ ಬಗ್ಗೆ ಸಾಲೂರು ಶಾಖೆಯ ಉಪ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸು ದಾಖಲಿಸಿರುತ್ತಾರೆ. ನಂತರ ತನಿಖಾಧಿಕಾರಿ ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ದಾಖಲೆಗಳಿಂದ ಅರಣ್ಯ ಉತ್ಪನ್ನವನ್ನು ಈ ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದರಿಂದ, ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮೋಹನ್ ಎನ್ ಗಂಗೋಳಿ, ಕ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ಅ.ಮೊ.ಸಂಖ್ಯೆ: 50/13–14 ರಲ್ಲಿ ಜಪ್ತು ಮಾಡಿದ ವಾಹನಗಳಾದ (1) ಹಿರೋ ಹೊಂಡಾ ಸ್ಪ್ಲೆಂಡರ್ ಬೈಕ್ ಕೆಎ–17–ಎಲ್–3920 (ಛಾಸ್ಸಿಸ್ ನಂ: 00E20F15260 ಮತ್ತು ಇಂಜಿನ್ ನಂ. ಕಂಡು ಬಂದಿರುವುದಿಲ್ಲ) (2) ಸುಜಿಕಿ ವಿಕ್ಟರ್ ಬೈಕ್ ಕೆಎ–14–ಟಿಆರ್–2814 (ಕೆಎ–14–ಎಸ್–1036) (ಛಾಸ್ಸಿಸ್ ನಂ: MD625AF1541F63413 ಮತ್ತು ಇಂಜಿನ್ ನಂ: OF1F41217570) ಗಳನ್ನು ಮತ್ತು ವಾಹನದಲ್ಲಿದ್ದ 2 ಬೀಟೆ ನಾಟಾ 0.192ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 19–12–2015 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**P.R. 59**
**SC-25**

**ಮೋಹನ್ ಎನ್ ಗಂಗೋಳಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

## ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ

**ಕರ್ನಾಟಕ ಗೃಹ ಮಂಡಳಿ ಕಟ್ಟಡ, 'ಸಿಬಿಎಬಿ' ಕಾಂಪ್ಲೆಕ್ಸ್ 'ಎಫ್' ಬ್ಲಾಕ್, 5ನೇ ಮಹಡಿ, ಕಾವೇರಿ ಭವನ, ಕೆ.ಜಿ ರಸ್ತೆ, ಬೆಂಗಳೂರು–560009.**

**ಪ್ರಕಟಣೆ**

**ಸಂಖ್ಯೆ : ಡಿಎಸ್‌ಕೆ/ಎಸ್‌ಟಿಟಿ/30/2015–16, ದಿನಾಂಕ 15–12–2015.**

**ವಿಷಯ :** 2014–15ನೇ ಸಾಲಿನಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು ನುರಿಸಿದ ಕಬ್ಬಿನಿಂದ ಉತ್ಪಾದಿಸಲಾದ ಸಕ್ಕರೆ ಇಳುವರಿಯ ಆಧಾರದ ಮೇಲೆ 2015–16ನೇ ಸಾಲಿಗೆ ಮೊದಲ ಕಂತಿನ ರೂಪದಲ್ಲಿ ಪಾವತಿಸಬೇಕಾದ ನ್ಯಾಯ ಮತ್ತು ಲಾಭದಾಯಕ ಬೆಲೆ (Fair and Remunerative Price) ಪ್ರಕಟಣೆಯ ಕುರಿತು.

**ಉಲ್ಲೇಖ :**

1. ಗ್ರಾಹಕ ವ್ಯವಹಾರ, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಕೃಷಿ ಭವನ, ನವದೆಹಲಿ ಇವರ ಪತ್ರ ಸಂ: 3(1)/2014–ಎಸ್‌ಪಿ II, ದಿನಾಂಕ 02–02–2015.
2. ಸಕ್ಕರೆ ನಿರ್ದೇಶನಾಲಯದ ಪ್ರಕಟಣೆ ಸಂಖ್ಯೆ : ಡಿಎಸ್‌ಕೆ/ಎಸ್‌ಟಿಟಿ/30/2015–16, ದಿನಾಂಕ 02.11.2015.
3. ದಿನಾಂಕ 01–12–2015 ರಂದು ನಡೆದ ಕಬ್ಬು ನಿಯಂತ್ರಣ ಮಂಡಳಿಯ ಸಭೆಯ ನಡವಳಿಗಳು.

ಕೇಂದ್ರ ಸರ್ಕಾರವು 2015–16ನೇ ಸಕ್ಕರೆ ಹಂಗಾಮಿಗೆ ಶೇ. 9.5 ರಷ್ಟು ಸಕ್ಕರೆ ಇಳುವರಿಗೆ ಪ್ರತಿ ಮೆ.ಟನ್ ಕಬ್ಬಿಗೆ ₹ 2300/– ನ್ನು ನ್ಯಾಯ ಮತ್ತು ಲಾಭದಾಯಕ ಬೆಲೆಯನ್ನಾಗಿ (Fair and Remunerative Price) ಹಾಗೂ ನಂತರದ ಶೇ.1 ರಷ್ಟು ಇಳುವರಿಗೆ ಪ್ರತಿ ಮೆ.ಟನ್‌ಗೆ ₹ 242/– ನ್ನು ಹೆಚ್ಚುವರಿ ಬೆಲೆಯನ್ನಾಗಿ ಉಲ್ಲೇಖ (1) ರಂತೆ ನಿಗಧಿಪಡಿಸಿದೆ.

ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮ, 2013 ಮತ್ತು ತಿದ್ದುಪಡಿ ಅಧಿನಿಯಮ, 2014 ರನ್ವಯ 2014–15ನೇ ಸಾಲಿನಲ್ಲಿ ರಾಜ್ಯದಲ್ಲಿ ಕಾರ್ಯನಿರ್ವಹಿಸಿದ 65 ಸಕ್ಕರೆ ಕಾರ್ಖಾನೆಗಳು ಸಲ್ಲಿಸಿದ ಆರ್.ಟಿ. 8 (ಸಿ) ವರದಿಗಳ ಪ್ರಕಾರ ನುರಿಸಿದ ಕಬ್ಬಿನಿಂದ ಉತ್ಪಾದಿಸಲಾದ ಸಕ್ಕರೆ ಇಳುವರಿಯನ್ನು ಉಲ್ಲೇಖ (2) ರಂತೆ ಪ್ರಕಟಿಸಲಾಗಿದೆ.

ಮೇಲ್ಕಂಡಂತೆ ಉಲ್ಲೇಖ (3) ರಂತೆ ದಿನಾಂಕ 01–12–2015 ರಂದು ನಡೆದ ಕಬ್ಬು ನಿಯಂತ್ರಣ ಮಂಡಳಿ ಸಭೆಯಲ್ಲಿ 2015–16ನೇ ಕಬ್ಬು ನುರಿಸುವ ಹಂಗಾಮಿಗೆ ರಾಜ್ಯದ ಸಕ್ಕರೆ ಕಾರ್ಖಾನೆಗಳು ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) (ತಿದ್ದುಪಡಿ) ಅಧಿನಿಯಮ–2014 ರ ಕಲಂ 9(1)ರ ಪ್ರಕಾರ ಮೊದಲ ಕಂತಿನ ರೂಪದಲ್ಲಿ ಪಾವತಿಸಬೇಕಾದ ನ್ಯಾಯ ಮತ್ತು ಲಾಭದಾಯಕ ಬೆಲೆ (Fair and Remunerative Price) ಯನ್ನು ಪ್ರಕಟಿಸಲು ಹಾಗೂ ಈ ಕಬ್ಬಿನ ದರವು ಎಫ್.ಆರ್.ಪಿ. ನಿಯಮದಂತೆ ಎಕ್ಸ್ ಗೇಟ್ ದರವಾಗಿರುತ್ತದೆಂದು ನಿರ್ಣಯಿಸಿರುತ್ತದೆ.

